

# ಹಂಪಿ ಕನ್ನಡ ವಿಶ್ವವಿದ್ಯಾಲಯ

## ಹಂಪಿ

ಎಂ.ಫಿಲ್ ಸಂಪ್ರಬಂಧದ ವಿಷಯ

# ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ

ಮಾರ್ಗದರ್ಶಕರು

ಡಾ. ಲೋಕೇಶ್ವರಪ್ಪ ಕೆ.ಬಿ.

ಸಂಶೋಧನಾ ವಿದ್ಯಾರ್ಥಿ

ಶ್ರೀಮತಿ ಜ್ಯೋತಿಪ್ರಭಾ



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬಿ.ಎಂ.ಶ್ರೀ [illegible]

3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯

959




ಹಂಪಿ ಕನ್ನಡ ವಿಶ್ವವಿದ್ಯಾಲಯ

ಹಂಪಿ

ಎಂ.ಫಿಲ್. ಸಂಪ್ರಬಂಧದ ವಿಷಯ

# ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ

ಮಾರ್ಗದರ್ಶಕರು

ಡಾ. ಲೋಕೇಶ್ವರಪ್ಪ ಕೆ.ಬಿ.

ಸಂಶೋಧನಾ ವಿದ್ಯಾರ್ಥಿ

ಶ್ರೀಮತಿ ಜ್ಯೋತಿಪ್ರಭಾ



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬಿ.ಎಂ.ಶ್ರೀ ಕಲಾಭವನ

3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – 560 019

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರಿನ ಎಂ.ಫಿಲ್ ಸ್ನಾತಕೋತ್ತರ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧-೧೨ರ ಸಾಲಿನ ಎಂ.ಫಿಲ್. ಪದವಿಗಾಗಿ ಸ್ವಪ್ನ ಸಾರಸ್ವತ ಕಾದಂಬರಿಯ - **'ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ'** ಎಂಬ ಸಂಪ್ರಬಂಧವನ್ನು ನನ್ನ ವಿದ್ಯಾರ್ಥಿ ಶ್ರೀಮತಿ ಜ್ಯೋತಿಪ್ರಭಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ಸಂಪ್ರಬಂಧ ನನ್ನ ವಿದ್ಯಾರ್ಥಿಯ ಸ್ವಂತ ಬರವಣಿಗೆಯೇ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢಪಡಿಸುತ್ತಿದ್ದೇನೆ.

ದಿನಾಂಕ : ೨೬ನೇ ಜೂನ್ ೨೦೧೨

ಸ್ಥಳ : ಬೆಂಗಳೂರು

ಮಾರ್ಗದರ್ಶಕರು

**ಡಾ. ಕೆ.ಬಿ. ಲೋಕೇಶ್ವರಪ್ಪ**

ಡಾ|| ಲೋಕೇಶ್ವರಪ್ಪ ಕೆ.ಬಿ.
ಕನ್ನಡ ವಿಭಾಗ, ಎಂ.ಇ.ಎಸ್. ಕಾಲೇಜು
ಮಲ್ಲೇಶ್ವರ, ಬೆಂಗಳೂರು - 3.

# ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರಿನ ಎಂ.ಫಿಲ್ ಸ್ನಾತಕೋತ್ತರ ಕೇಂದ್ರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧-೧೨ರ ಸಾಲಿನ ಎಂ.ಫಿಲ್. ಪದವಿಗಾಗಿ ಸ್ವಪ್ನ ಸಾರಸ್ವತ – **'ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ'** ಎಂಬ ಸಂಪ್ರಬಂಧವನ್ನು ಡಾ. ಕೆ.ಬಿ. ಲೋಕೇಶ್ವರಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯೇ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢಪಡಿಸುತ್ತಿದ್ದೇನೆ.

ದಿನಾಂಕ : ೨೬ನೇ ಜೂನ್ ೨೦೧೨

ಸ್ಥಳ : ಬೆಂಗಳೂರು

ವಿದ್ಯಾರ್ಥಿ

ಶ್ರೀಮತಿ ಜ್ಯೋತಿಪ್ರಭಾ

# ಪರಿವಿಡಿ


| | | | |
|---|---|---|---|
| **ಅಧ್ಯಾಯ 1** | – | ಅ) ಪೀಠಿಕೆ | 1 |
| | | ಆ) ಉದ್ದೇಶ ಮತ್ತು ವ್ಯಾಪ್ತಿ | 3 |
| **ಅಧ್ಯಾಯ 2** | – | ಅ) ಕಾದಂಬರಿ | 7 |
| | | ಆ) ಲೇಖಕರ ಪರಿಚಯ | 14 |
| **ಅಧ್ಯಾಯ 3** | – | ಗೋವೆಯಲ್ಲಿ ಪೋರ್ಚುಗೀಸರ ಆಡಳಿತ | 17 |
| **ಅಧ್ಯಾಯ 4** | – | ಸಾರಸ್ವತ ಸಮುದಾಯದ ಸಂಸ್ಕೃತಿಯ ಸ್ವರೂಪ | 25 |
| **ಅಧ್ಯಾಯ 5** | – | ಪಾತ್ರಗಳ ನಿರ್ವಹಣೆ | 42 |
| **ಅಧ್ಯಾಯ 6** | – | ಮತಾಂತರ ಸಾರ್ವಕಾಲಿಕ ಬಹುಮುಖತೆ | 73 |
| **ಅಧ್ಯಾಯ 7** | – | ಉಪಸಂಹಾರ | 90 |

## ಅಧ್ಯಾಯ – ೧

# ಅ. ಪೀಠಿಕೆ

ಇತಿಹಾಸಕ್ಕೊಂದು ಚರಿತ್ರೆ ಇರುವಂತೆ ಸಾಹಿತ್ಯಕ್ಕೂ ಒಂದು ನಿರ್ದಿಷ್ಟ ಚರಿತ್ರೆ ಇರುತ್ತದೆ. ಪ್ರಾಣಿಯ ಜೀವನದಿಂದ ಮಾನವ ಜೀವನಕ್ಕೆ ವಿಕಸನಗೊಂಡ ಮಾನವ ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಗೊಳಿಸಲು ಸಂಜ್ಞಾಕ್ರಮವನ್ನು ರೂಢಿಸಿಕೊಂಡು, ನಂತರ ಧ್ವನಿಯ ಅನುಕರಣವನ್ನು ಬಳಸಿ ಭಾಷೆಯನ್ನಾಗಿ ಪರಿವರ್ತಿಸಿದ. ಹೀಗೆ ಸಂವಹನಕ್ಕಾಗಿ ಹುಟ್ಟಿದ ಭಾಷೆ ಮಾನವನ ಮನೋರಂಜನೆಯ ಜೊತೆಗೆ ಸಮಗ್ರಾಲೋಚನೆಯ ಅಭಿವ್ಯಕ್ತಿಗೆ ಕಾರಣವಾಗಿ ಸಾಹಿತ್ಯದ ಉಗಮವಾಯಿತು. ಈ ಹಂತದಲ್ಲೇ ಪ್ರಾಣಿ, ಪಕ್ಷಿಗಳ ಚಿತ್ರವನ್ನು ಬಿಡಿಸಲಾರಂಭಿಸಿದ ಆದಿಮಾನವ ತನ್ನ ಆಡುಭಾಷೆಗೆ ಲಿಪಿಯನ್ನು ಕಂಡು ಕೊಂಡನು. ಲಿಪಿಯಿಲ್ಲದ ಮೌಖಿಕ ಪರಂಪರೆ ಜಾನಪದ ಸಾಹಿತ್ಯವೆನ್ನಿಸಿಕೊಂಡರೆ, ಲಿಪಿಯ ಮೂಲಕ ಶಿಷ್ಟ ಸಾಹಿತ್ಯ ರೂಪುಗೊಂಡಿತು. ಆಯಾ ಕಾಲ, ದೇಶ, ಸಂಸ್ಕೃತಿ, ಜನಾಂಗಕ್ಕೆ ತಕ್ಕ ಹಾಗೆ ವಿವಿಧ ಭಾಷೆಗಳ ಉಗಮವಾಗಿ ಸಾಹಿತ್ಯವೂ ಸಹ ಹಲವಾರು ಪ್ರಕಾರಗಳಲ್ಲಿ ಮೂಡಿಬರಲಾರಂಭಿಸಿತು.

ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವು ಸಹ ಪೂರ್ವಗನ್ನಡ, ಹಳಗನ್ನಡ, ನಡುಗನ್ನಡ ಮೊದಲಾದ ಹಲವಾರು ಘಟ್ಟಗಳನ್ನು ದಾಟುತ್ತಾ ಹಲವು ಹಂತವಾಗಿ ಬೆಳೆಯುತ್ತಾ ಬಂದಿತು. ಹತ್ತೊಂಬತ್ತನೇಯ ಶತಮಾನದ ಕೊನೆಯಲ್ಲಿಯೇ ತಳಹದಿ ಹಾಕಿಕೊಂಡು ಇಪ್ಪತ್ತನೇಯ ಶತಮಾನದ ಆಧಿಯಲ್ಲಿ ಆಧುನಿಕ ಕನ್ನಡ ಸಾಹಿತ್ಯ ಮೂಡಿಬಂದಿತು. ಈ ಕಾಲದಲ್ಲಿ ಪಾಶ್ಚಾತ್ಯ ಪ್ರೇರಣೆಯಿಂದ ಹಲವಾರು ಸಾಹಿತ್ಯ ಪ್ರಕಾರಗಳು ರೂಪುಗೊಂಡು ಲೇಖಕ/ಕಿಯರ ಸಂಖ್ಯೆಯ ಜೊತೆಯಲ್ಲೇ ಓದುಗರ ಸಂಖ್ಯೆಯೂ ಹೆಚ್ಚಾಗುತ್ತಾ ಹೋಯಿತು. ನನ್ನ ಈ ಅಧ್ಯಯನಕ್ಕೆ ಜನಪ್ರಿಯ ಕನ್ನಡ ಸಾಹಿತ್ಯ ಪ್ರಕಾರವಾದ ಕಾದಂಬರಿಯ ಪ್ರಕಾರದಲ್ಲಿ ಮಾನ್ಯ ಗೋಪಾಲಕೃಷ್ಣ ಪೈ ಅವರ 'ಸ್ವಪ್ನ ಸಾರಸ್ವತ' ಕಾದಂಬರಿಯನ್ನು ಆರಿಸಿಕೊಳ್ಳಲಾಗಿದೆ.

'ಸ್ವಪ್ನ ಸಾರಸ್ವತ' ಶ್ರೀ ಗೋಪಾಲಕೃಷ್ಣ ಪೈಯವರ ಮೊದಲ ಕಾದಂಬರಿ. ಈ ಕಾದಂಬರಿಗೆ ಮುನ್ನುಡಿ ಬರೆದಿರುವ ಶ್ರೀ ಎಸ್.ಆರ್. ವಿಜಯಶಂಕರ್ ಅವರು

ಹೇಳಿರುವಂತೆ ಪೈಯವರು ಅನುಭವದ ಆಳವಾದ ಶೋಧನೆಯಲ್ಲಿ ಆಸಕ್ತಿ ಉಳ್ಳವರು. ಈ ನಿರಂತರ ಶೋಧದ ಫಲವೇ ಕಳೆದ ನಾಲ್ಕು ನೂರು ವರುಷಗಳಲ್ಲಿ ಹಾದು ಬಂದ ಸಾರಸ್ವತ ಸಮುದಾಯದ ಅನುಭವಗಳ ಮೂಲಕ ಚರಿತ್ರೆ ಹಾಗೂ ವರ್ತಮಾನ ಜೀವನದ ಪರಸ್ಪರ ಮುಖಾಮುಖಿಗಳನ್ನೂ, ಸಂಬಂಧಗಳನ್ನೂ ವೈಯಕ್ತಿಕ ಅನುಭವದ ನೆಲೆಗಳಲ್ಲಿ ಕೌಟುಂಬಿಕ ಸಂದರ್ಭಗಳಲ್ಲಿಟ್ಟು ಪರೀಕ್ಷಿಸುತ್ತದೆ ಈ ಕಾದಂಬರಿ.

ಉತ್ತರ ಭಾರತದಲ್ಲಿ ಸಾವಿರಾರು ವರ್ಷಗಳ ಹಿಂದೆ ಹರಿಯುತ್ತಿದ್ದ ಸರಸ್ವತಿ ನದಿಯ ತೀರದಲ್ಲಿ ವಾಸವಾಗಿದ್ದ ಸಾರಸ್ವತ ಬ್ರಾಹ್ಮಣರು ಅಲ್ಲಿ ತಲೆದೋರಿದ ಬರಗಾಲದ ತೀವ್ರತೆಯನ್ನು ತಡೆಯಲಾರದೆ ವಲಸೆ ಹೊರಡುತ್ತಾರೆ. ಹಾಗೆ ದಕ್ಷಿಣಾಭಿಮುಖವಾಗಿ ಬಂದ ಕೆಲವು ಕುಟುಂಬಗಳು ಗೋವೆಯಲ್ಲಿ ನೆಲೆಯೂರುತ್ತವೆ. ಕೃಷಿ ಹಾಗು ವ್ಯಾಪಾರಗಳಲ್ಲಿ ತೊಡಗಿಸಿಕೊಂಡು ನೆಮ್ಮದಿಯಿಂದ ಬದುಕುತ್ತಿದ್ದ ಸಾರಸ್ವತರ ಜೀವನ ಮೊದಲಿಗೆ ಮುಸ್ಲಿಮರ ಆಕ್ರಮಣದಿಂದ ತದನಂತರ ಪೋರ್ಚುಗೀಸರ ದಾಳಿಯಿಂದ ಏರುಪೇರಾಗುತ್ತದೆ. ಅದರಲ್ಲೂ ಪೋರ್ಚುಗೀಸರು ಸಾರಸ್ವತರನ್ನು ಬಲವಂತವಾಗಿ ಕ್ರಿಶ್ಚಿಯನ್ ಮತಕ್ಕೆ ಮತಾಂತರಗೊಳ್ಳುವಂತೆ ಹಿಂಸಿಸತೊಡಗಿದಾಗ ತಮ್ಮ ಜೀವಗಳನ್ನು ಹಾಗು ಧರ್ಮವನ್ನು ರಕ್ಷಿಸಿಕೊಳ್ಳಲು ಸಾರಸ್ವತ ಕುಟುಂಬಗಳು ಮತ್ತೇ ವಲಸೆ ಹೊರಡಬೇಕಾಗುತ್ತದೆ. 'ಸ್ವಪ್ನ ಸಾರಸ್ವತ'ದಲ್ಲಿ ಗೋವೆಯಿಂದ ದಕ್ಷಿಣಾಭಿಮುಖವಾಗಿ ವಲಸೆ ಹೊರಟ ಸಾರಸ್ವತರು ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ನೆಲೆಯೂರುವ ಕಥೆಯಿದೆ.

ಕಥೆಯಲ್ಲಿ ಪುರ್ವಾರ್ಧದಲ್ಲಿ ಪ್ರಮುಖ ಪಾತ್ರವಾದ ವಿಟ್ಠುಪೈಯು ಸಾರಸ್ವತ ಸಮುದಾಯದ ವಲಸೆ ಪ್ರಕ್ರಿಯೆಯ ಜವಾಬ್ದಾರಿವಹಿಸಿದರೆ ಉತ್ತರಾರ್ಧದ ಪ್ರಧಾನ ಪಾತ್ರವಾಗಿರುವ ರಾಮಚಂದ್ರ ಪೈ ವೈಯಕ್ತಿಕವಾಗಿ ತನ್ನ ಕುಟುಂಬದವರಿಗೆ ಒಂದು ನೆಲೆ ಮಾಡಿಕೊಡುವ ಜವಾಬ್ದಾರಿವಹಿಸುತ್ತಾನೆ ಹೀಗೆ ಸಮಷ್ಠಿ ನೆಲೆಯಿಂದ ವ್ಯಷ್ಠಿ ನೆಲೆಗೆ ಕಥೆ ತಿರುವು ತೆಗೆದುಕೊಳ್ಳುತ್ತದೆ.

ಕಥೆಯ ಆರಂಭವದಿಂದ ಮುಕ್ತಾಯದವರೆಗೂ ಕಾಣಿಸಿಕೊಳ್ಳುವ ನಾಗ್ಡೊ ಬೇತಾಳನ ಪಾತ್ರ ಕಥೆಯ ಪ್ರತಿಯೊಂದು ವಿಷಯಕ್ಕೂ, ಘಟನೆಗೂ ಸಾಕ್ಷಿಯಾಗಿದ್ದು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಜನರ ಬೆಂಬಲಕ್ಕೆ ನಿಲ್ಲುತ್ತದೆ. ಆತನ ಬೃಹದಾಕಾರದಂತೆ ಆತನ ಇರುವಿಕೆಯೂ ಕಥೆಯನ್ನು ಸಂಪೂರ್ಣವಾಗಿ ಆವರಿಸುತ್ತದೆ.

'ಕಾದಂಬರಿಯಲ್ಲಿ ಬರುವ ರಾಜಕೀಯ ಸ್ಥಿತ್ಯಂತರಗಳು, ಕುಟುಂಬದ ದಾಯಾದಿ ಕಲಹ, ನಿಯಂತ್ರಣದಲ್ಲಿರದ ಮನುಷ್ಯನ ದುರಾಸೆ ಹಾಗೂ ದುರ್ಬಲ ಘಳಿಗೆಗಳು ವ್ಯಕ್ತಿಯೊಬ್ಬ ಮಾಡುವ ತಪ್ಪುಗಳು ಹಾಗೂ ಅಸಮರ್ಪಕ ನಿರ್ಣಯಗಳು – ಹೀಗೆ ಒಂದಕ್ಕೊಂದು ತಳಕು ಹಾಕಿಕೊಂಡು ದುರಂತ ಘಟನಾವಳಿಗಳು ಒಂದನ್ನೊಂದು

ಹಿಂಬಾಲಿಸುತ್ತವೆ. ಗ್ರೀಕ್ ದುರಂತ ಕತೆಗಳಲ್ಲಾಗುವ ತಾತ್ವಿಕ ಶೋಧದಂತೆ ಮನುಷ್ಯನ ಈ ಸಂಕಷ್ಟ, ಸಮಸ್ಯೆ, ದುರಂತಗಳಿಗೆ ಅವನೇ ಎಷ್ಟು ಕಾರಣ? ಮನುಷ್ಯನ ಹೊರಗಿನ ದೈವ (ನಾಗಶಾಪ) ಪ್ರಕೃತಿ ಇತ್ಯಾದಿಗಳ ಜವಾಬ್ದಾರಿ ಏನು? ಇವೆಲ್ಲಾ ಕೇವಲ ಚಾರಿತ್ರಿಕ ಸಂದರ್ಭದ ಶಿಶುಗಳೋ? ದೈವ ಲೀಲೆಯೋ ಮನುಷ್ಯ ಸ್ವಯಂಕೃತ ಅಪರಾಧಗಳೋ? ಈ ಪ್ರಶ್ನೆಗಳ ಹಿಂದಿನ ತಾತ್ವಿಕ ನೆಲೆಗಳನ್ನು ಪರೀಕ್ಷಿಸಲು ಕಾದಂಬರಿ ಪ್ರಯತ್ನಿಸುತ್ತದೆ [ಮುನ್ನುಡಿ – ಎಸ್.ಆರ್. ವಿಜಯಶಂಕರ್].

ಐತಿಹಾಸಿಕ ವೈಚಾರಿಕತೆಯ ಜೊತೆಗೆ ಕೌಟುಂಬಿಕ ಸಮಸ್ಯೆಗಳೂ ಸೇರಿ ಒಂದು ಸಂವೇದನಾಶೀಲ ದೀರ್ಘ ಕಥನವಾಗಿರುವ 'ಸ್ವಪ್ನ ಸಾರಸ್ವತ' ಕಾದಂಬರಿಯನ್ನು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಪರಿವಿಡಿಯಲ್ಲಿ ನಮೂದಿಸಿರುವಂತೆ ಏಳು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ.

## ಆ. ಉದ್ದೇಶ ಮತ್ತು ವ್ಯಾಪ್ತಿ

'ಸರ್ವ ಜನಾಂಗದ ಶಾಂತಿಯ ತೋಟ' ಎಂದು ಕುವೆಂಪುರವರು ಕರ್ನಾಟಕದ ಹಿರಿಮೆಯನ್ನು ಪ್ರಶಂಸಿರುವುದು ಅಕ್ಷರಶಃ ನಿಜ. ಇಲ್ಲಿ ಬಂದು ನೆಲೆಸುವ ವಿವಿಧ ಜನಾಂಗಗಳಿಗೆ, ಅನ್ಯಭಾಷಿಕರಿಗೆ, ಅನ್ಯ ಧರ್ಮೀಯರಿಗೆ ಸೌಹಾರ್ದತೆಯ ವಾತಾವರಣವನ್ನು ಕರ್ನಾಟಕ ಕಲ್ಪಿಸಿಕೊಟ್ಟಿದೆ. ಭಾರತದೇಶದ ಎಲ್ಲಾ ರಾಜ್ಯಗಳ ಸ್ಥಳೀಯ ಜನಾಂಗಗಳು ಕರ್ನಾಟಕದಲ್ಲಿ ನೆಲೆಸಿರುವುದನ್ನು ಕಾಣಬಹುದೆನ್ನುವುದು ಅತಿಶಯೋಕ್ತಿಯಾಗಲಾರದು.

ಯಾವುದೇ ಜನಾಂಗವೂ ತನ್ನ ಮೂಲನೆಲೆಯಿಂದ ಮತ್ತೊಂದು ಸ್ಥಳಕ್ಕೆ ಬಂದು ನೆಲೆಸುವ ಹಿಂದೆ ಹಲವಾರು ಕಾರಣಗಳಿರುತ್ತವೆ. ಹಾಗೆಯೇ ಸಾರಸ್ವತ ಸಮುದಾಯ ಗೋವೆಯಿಂದ ಕರ್ನಾಟಕದ ಕರಾವಳಿ ಪ್ರದೇಶಗಳಿಗೆ ವಲಸೆ ಬಂದುದರ ಹಿಂದೆ ಪ್ರಬಲವಾದ ಚಾರಿತ್ರಿಕ ಹಿನ್ನೆಲೆಯಿದೆ. ನಾನ್ನೂರು ವರ್ಷಗಳ ಹಿಂದೆ ಗೋವಾದಲ್ಲಿ ಸಂತೃಪ್ತ ಜೀವನ ನಡೆಸುತ್ತಿದ್ದ ಸಾರಸ್ವತ ಬ್ರಾಹ್ಮಣ ಕುಟುಂಬಗಳು ಪೋರ್ಚುಗೀಸರ ಆಕ್ರಮಣದಿಂದ ತಮ್ಮ ಜೀವಗಳನ್ನು ಮಾತ್ರವಲ್ಲದೆ ತಮ್ಮ ಧರ್ಮವನ್ನು ಸಹ ಕಾಪಾಡಿಕೊಳ್ಳಲು ದಕ್ಷಿಣಾಭಿಮುಖವಾಗಿ ವಲಸೆ ಹೋಗಬೇಕಾಗುತ್ತದೆ.

ಗೋವೆಯಲ್ಲಿ ನಡೆದ ಪೋರ್ಚುಗೀಸರ ಆಡಳಿತದ ಐತಿಹಾಸಿಕ ಹಿನ್ನೆಲೆಯಲ್ಲಿ ಸಾರಸ್ವತ ಸಮುದಾಯದ ಧಾರ್ಮಿಕ, ಸಾಮಾಜಿಕ, ಪಾರಂಪಾರಿಕ ವಿಚಾರಗಳ ನಡುವೆ ವಿಟ್ಠುಪೈಯ ಕುಟುಂಬದ ವಂಶಗಾಥೆಯನ್ನು ಅಳವಡಿಸಿರುವ ಕಥಾವಸ್ತುವನ್ನಿಟ್ಟು ಕೊಂಡು ಗೋಪಾಲಕೃಷ್ಣ ಪೈಯವರು 'ಸ್ವಪ್ನ ಸಾರಸ್ವತ' ಕಾದಂಬರಿಯನ್ನು ರಚಿಸಿದ್ದಾರೆ. ಇತಿಹಾಸದ ಆಳವಾದ ಅಧ್ಯಯನ ಹಾಗೂ ಇತಿಹಾಸವನ್ನು ಕಥೆಯಾಗಿಸುವ ಪ್ರತಿಭೆ

ಇವೆರಡರ ಸಂಗಮವನ್ನು ಕಾಣಬಹುದಾದ ಈ ಕಾದಂಬರಿ ಮಾನ್ಯ ಗೋಪಾಲಕೃಷ್ಣ ಪೈಯವರನ್ನು ಭೇಟಿಯಾದಾಗ ಸ್ವತಃ ಅವರೇ ತಿಳಿಸಿರುವಂತೆ ಹದಿನೈದು ವರ್ಷಗಳ ಸಂಶೋಧನೆಯ ಫಲವಾಗಿ ಮೂಡಿಬಂದಿದೆ. 'ಸ್ವಪ್ನ ಸಾರಸ್ವತ'ವು ಸುಮಾರು ನಾನ್ನೂರು ವರ್ಷಗಳ ಕಾಲಮಾನವನ್ನು ಹೊಂದಿದ್ದು, ಒಂಬತ್ತು ತಲೆಮಾರುಗಳು, ನೂರೈವತ್ತಕ್ಕಿಂತಲೂ ಹೆಚ್ಚು ಪಾತ್ರಗಳು, ನೂರಾರು ಮೈಲಿ ವಿಸ್ತೀರ್ಣದ ಸ್ಥಳಗಳು, ಇತಿಹಾಸ, ಸಂಸ್ಕೃತಿ, ವಲಸೆಯ ಪ್ರಕ್ರಿಯೆ ಮುಂತಾದ ನೂರಾರು ವಿಷಯಗಳನ್ನು ಒಳಗೊಂಡಿರುವ ೪೭೦ ಪುಟಗಳ ಬೃಹತ್ ಕಾದಂಬರಿಯಾಗಿದೆ.

ಕರ್ನಾಟಕದಲ್ಲಿ ನೆಲೆಯೂರಿರುವ ಮರಾಠಿ, ತುಳು, ಮುಸ್ಲಿಂ ಮೊದಲಾದ ಜನಾಂಗಗಳ ಬಗ್ಗೆ ಸಾಹಿತ್ಯ ಕೃಷಿ ನಡೆದಿರುವುದು ತೀರ ಕಡಿಮೆಯೆಂದೇ ಹೇಳಬಹುದು. ಅಂತಹದರಲ್ಲಿ ಸಾರಸ್ವತ ಸಮುದಾಯದ ಚಾರಿತ್ರಿಕ, ಸಾಂಸ್ಕೃತಿಕ ಕಥನವನ್ನು ಅಸಂಖ್ಯಾತ ಪಾತ್ರಗಳ ಮೂಲಕ ದಾಖಲಿಸಿರುವುದು 'ಸ್ವಪ್ನ ಸಾರಸ್ವತ'ದ ವಿಶಿಷ್ಟತೆಯಾಗಿದೆ. ಒಂದು ವಿದೇಶಿ ಆಕ್ರಮಣದಿಂದ ಧಾರ್ಮಿಕ ಕಾರಣಕ್ಕಾಗಿ ನಡೆಯುವ ವಲಸೆ ಪ್ರಕ್ರಿಯೆಯಿಂದುಂಟಾಗುವ ಸಮಸ್ಯೆಗಳು, ನಿರ್ವಸತಿಕರಣಗೊಂಡ ಜನರು ಒಂದು ಹೊಸಸ್ಥಳದಲ್ಲಿ ನೆಲೆಯೂರುವಾಗ ಉಂಟಾಗುವ ಸಮಸ್ಯೆಗಳು, ಹೊಸ ಭಾಷೆಯ, ಹೊಸ ಸಂಸ್ಕೃತಿಯ ಜನರೊಡನೆ ಬೆರೆಯುವ ಸವಾಲುಗಳು, ಕುಟುಂಬದ ಸದಸ್ಯರನ್ನು, ಆಸ್ತಿ-ಪಾಸ್ತಿಗಳನ್ನು ಕಳೆದುಕೊಂಡು ನಿರ್ಗತಿಕರಾದವರು ಮತ್ತೇ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಬಗೆ, ಭಿನ್ನ ಸಂಸ್ಕೃತಿಯ ಮಧ್ಯೆಯೂ ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಛಲ, ತಾವು ನೆಲೆ ನಿಂತ ನಾಡಿಗೆ ತಮ್ಮ ಕೊಡುಗೆಯನ್ನು ನೀಡುವ ಹಂಬಲ, ಇಂತಹ ಹಲವಾರು ಗಹನ ವಿಷಯಗಳನ್ನೊಳಗೊಂಡ 'ಸ್ವಪ್ನ ಸಾರಸ್ವತ' ಕಾದಂಬರಿಯನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸಿ ಸತ್ಯಶೋಧನೆ ಮಾಡುವುದೇ ಈ ಅಧ್ಯಯನದ ಉದ್ದೇಶವಾಗಿದೆ.

ಸಾಮಾನ್ಯವಾಗಿ ವಿದೇಶಿ ಆಕ್ರಮಣ ಎಂದಾಕ್ಷಣ ಭಾರತೀಯರಿಗೆ ಬ್ರಿಟಿಷರ ನೆನಪಾಗುವುದು ಸಹಜ. ಆದರೆ ಬ್ರಿಟಿಷರು ಭಾರತಕ್ಕೆ ಆಗಮಿಸುವ ನೂರಾರು ವರ್ಷಗಳ ಮೊದಲೇ ಒಂದು ಪುಟ್ಟ ಯುರೋಪಿಯನ್ ದೇಶ. ಸಾವಿರಾರು ಮೈಲಿಗಳನ್ನು ಸಮುದ್ರಯಾನದ ಮೂಲಕ ಕ್ರಮಿಸಿ ಭಾರತದ ದಕ್ಷಿಣ ಪೂರ್ವ ಕರಾವಳಿಯ ಕೆಲವು ಪ್ರಾಂತ್ಯಗಳನ್ನು ವಶಪಡಿಸಿಕೊಂಡು ಆಡಳಿತ ನಡೆಸಿದುದು ಭಾರತದ ಇತಿಹಾಸದ ಒಂದು ಪ್ರಮುಖ ಅಧ್ಯಾಯವೇ ಆಗಿದೆ. ಪೋರ್ಚುಗೀಸರು ಕರಾವಳಿ ಪ್ರಾಂತ್ಯಗಳ ನೈಸರ್ಗಿಕ ಸಂಪತ್ತನ್ನು ಲೂಟಿ ಮಾಡುವುದರ ಜೊತೆಗೆ ಸ್ಥಳೀಯ ಜನರ ಮೇಲೆ ನಡೆಸಿದ ಕ್ರೌರ್ಯ-ಅತ್ಯಾಚಾರಗಳು, ಮತಾಂತರದ ಪಿಡುಗು, ಮತಾಂಧತೆಯ ಅತಿರೇಕವಾದ ಇನ್‌ಕ್ವಿಸಿಷನ್ ಎಂಬ ಘೋರ ಶಿಕ್ಷೆ, ವಲಸೆ ಪ್ರಕ್ರಿಯೆ ಮುಂತಾದ

ಹಲವಾರು ಐತಿಹಾಸಿಕ ವಿಚಾರಗಳು 'ಸ್ವಪ್ನ ಸಾರಸ್ವತ'ದಲ್ಲಿ ದಾಖಲೆಯಾಗಿವೆ. ಈ ವಿಚಾರಗಳನ್ನು ಸಾಧ್ಯವಾದಷ್ಟು ಕೂಲಂಕಷವಾಗಿ ಪರಿಶೀಲಿಸಿ ಅಧ್ಯಯನ ನಡೆಸಬೇಕೆಂಬ ಹಂಬಲವೇ ಈ ಸಂಪ್ರಬಂಧದ ಉದ್ದೇಶವಾಗಿದೆ.

'ಸ್ವಪ್ನ ಸಾರಸ್ವತ'ದ ಕಥಾವಸ್ತುವಿನ ವ್ಯಾಪ್ತಿ ಬಲು ದೊಡ್ಡದು. ಉದಾಹರಣೆಗೆ ಗೋವೆಯಿಂದ ಕರ್ನಾಟಕಕ್ಕೆ ತಲುಪಿ, ಅಲ್ಲಿಂದ ಕುಂಬಳೆಯಲ್ಲಿ ವಿಟ್ಠುಪೈ ನೆಲೆಸುವವರೆಗೂ ಕ್ರಮಿಸಿದ ಸ್ಥಳಗಳು ಹಲವಾರು. ಚಿಳ್ಕುಡೆ, ಗೋಕರ್ಣ, ಕುಮಟೆ, ಹೊನ್ನಾವರ, ಬಾರಕೂರು, ಕುಂದಾಪುರ, ಕೊಕ್ಕರ್ಣೆ, ಬ್ರಹ್ಮಾವರ, ಉಡುಪಿ, ಮೂಲಿಕೆ, ಮಂಗಳೂರು, ಉಳ್ಳಾಲ, ಮಂಜೇಶ್ವರಗಳಲ್ಲೆಲ್ಲಾ ತಂಗುತ್ತಾ ವಿಟ್ಠುಪೈಯ ನೇತೃತ್ವದಲ್ಲಿ ಕೆಲವು ಕುಟುಂಬಗಳು ಕುಂಬಳೆಯಲ್ಲಿ ನೆಲೆಯೂರುತ್ತವೆ. ಆಯಾ ಸ್ಥಳದ ರಾಜರು–ರಾಣಿಯರ ಆಳ್ವಿಕೆಯ ಬಗ್ಗೆ, ಅಲ್ಲಿನ ಜನರೊಡನೆಯ ವ್ಯವಹಾರ, ಆಚಾರ ಪದ್ಧತಿಗಳು ಇವುಗಳ ಬಗ್ಗೆಯೇ ಒಂದು ಅಧ್ಯಯನ ಮಾಡಬಹುದಾಗಿದೆ. ಹೀಗೆ 'ಸ್ವಪ್ನ ಸಾರಸ್ವತ' ಸಂಶೋಧನೆಗಳಿಗೆ ವಿಪುಲ ಸಾಮಾಗ್ರಿ ಒದಗಿಸುವಂತಹ ವಿಶಿಷ್ಟ ಕಾದಂಬರಿಯಾಗಿದೆ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳ ಜೊತೆಗೆ ಹಲವಾರು ಪುರಸ್ಕಾರಗಳನ್ನು ಪಡೆದು ಸಾರಸ್ವತ ಸಮುದಾಯದ 'ಭಗವದ್ಗೀತೆ' ಎಂದು ಗೌರವ ಪಡೆದಿರುವ 'ಸ್ವಪ್ನ ಸಾರಸ್ವತ'ದ ಬಗ್ಗೆ ಈವರೆಗೆ ಕೆಲವು ಸಂಶೋಧನ ಪ್ರಬಂಧಗಳು ಮೂಡಿಬಂದಿವೆಯಾದರೂ ಈ ಕಾದಂಬರಿಯಲ್ಲಿ ಅಭಿವ್ಯಕ್ತಗೊಂಡಿರುವ ಐತಿಹಾಸಿಕ ದಾಖಲೆಗಳು, ಸಾರಸ್ವತ ಸಮುದಾಯದ ಮೂಲ ನೆಲೆ ಹಾಗೂ ಸಂಸ್ಕೃತಿ, ಧರ್ಮರಕ್ಷಣೆ, ವಲಸೆ ಪ್ರಕ್ರಿಯೆ, ಕರ್ನಾಟಕದಲ್ಲಿ ಸಾರಸ್ವತರ ನೆಲೆ, ಕನ್ನಡ ಸಂಸ್ಕೃತಿ, ಹಲವಾರು ಸಮಸ್ಯೆಗಳನ್ನು ಎದುರಿಸುತ್ತಾ ಅಳಿವಿನ ಅಂಚಿಗೆ ಬಂದು ಮತ್ತೇ ಪುನರುತ್ಥಾನವಾಗುವ ವಿಟ್ಠುಪೈಯ ಕೌಟುಂಬಿಕ ಕಥೆ, ಪಾತ್ರಗಳ ಪ್ರಾಮುಖ್ಯತೆ ಮುಂತಾದ ಪಾತ್ರಗಳ ಪ್ರಾಮುಖ್ಯತೆ ಮುಂತಾದ ಹಲವಾರು ವಿಷಯಗಳನ್ನು ಅಧ್ಯಯನಕ್ಕೆ ಒಳಪಡಿಸಿ ಕಾದಂಬರಿಯ ಒಂದು ಸಮಗ್ರ ಚಿತ್ರಣದ ಸ್ವರೂಪವನ್ನು ಕೊಡುವ ಸಂಪ್ರಬಂಧಗಳು ಬಂದಿಲ್ಲ. ಆ ನಿಟ್ಟಿನಲ್ಲಿ 'ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಪ್ರಸ್ತುತಪಡಿಸಲಾಗುತ್ತಿದೆ.

* 'Swapna Saraswatha' is an outcome of decades of loving and arduous research, delving deep into various written and oral repositories. But the author has handled such material with care and steered clear of ethnic excesses in terms of ritualistic and quotidian details. This is carefully crafted novel with many lyrical passages.....

- H.S. Raghavendra Rao

---

* [ಸ್ವಸಾ. ಅಭಿಪ್ರಾಯಗಳು ಪುಟ ೪೭೩]

* ಚರಿತ್ರೆಯ ಆಳವಾದ ಅಧ್ಯಯನ, ಸಮೃದ್ಧ ಕಲ್ಪನೆ, ಇವುಗಳ ಸಮ್ಮಿಶ್ರ ಫಲ, ಒಂದು ಎಪಿಕ್ ಪ್ರಮಾಣದ ರುದ್ರ ಭಯಾನಕ ದುರಂತದಲ್ಲಿ ಪರ್ಯವಸಾನ ಗೊಳ್ಳುತ್ತಿದ್ದಾಗ ಕೂಡಾ ದೈವದ ಬೆನ್ನು ಹಿಡಿದು ಅಮೂರ್ತ ಭವಿಷ್ಯದೆಡೆಗೆ ಸಾಗಿದ ಇದೊಂದು ಸಾರಸ್ವತ ಮಹಾಭಾರತ; ಒಂದು ಅದ್ಭುತ ಅನುಭವ ಕೊಡುವ ಕೃತಿ

– ಶ್ರೀನಿವಾಸ ವೈದ್ಯ

ಹೀಗೆ ಹಲವಾರು ಲೇಖಕರಿಂದ ಸ್ವಪ್ನಸಾರಸ್ವತೆ ಪ್ರಶಂಶಿಸಲ್ಪಟ್ಟಿದೆ.

ಒಂದು ಮಹಾಕಾವ್ಯದ ಆಯಾಮ ಮತ್ತು ಹರಹು ಹೊಂದಿದ್ದು, ಬರೇ ಕನ್ನಡದ ಜಾಯಮಾನಕ್ಕೆ ಮಾತ್ರವಲ್ಲ, ಇಡೀ ಭಾರತದ ಕಥಾ ಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಪಡೆದಿರುವ ಕೃತಿ ಎಂದು ಹಲವಾರು ವಿಮರ್ಶಕರು ಅಭಿಪ್ರಾಯಪಟ್ಟಿರುವ ಈ ಕಾದಂಬರಿಯನ್ನು ವಿವಿಧ ದೃಷ್ಟಿಕೋನದಿಂದ ವಿಶ್ಲೇಷಿಸಿ, ಅದಕ್ಕೆ ಪೂರಕವಾಗಿ ಸಂಬಂಧಪಟ್ಟ ಪರಾಮರ್ಶನ ಗ್ರಂಥಗಳನ್ನು, ವಿಮರ್ಶೆಗಳನ್ನು, ಸಂದರ್ಶನಗಳನ್ನು, ಅಂತರ್ಜಾಲದ ತಾಣಗಳನ್ನು, ಇತರ ಸಾಮಾಗ್ರಿಗಳನ್ನು ಬಳಸಿಕೊಂಡು ಒಂದು ಉತ್ತಮ ಸಂಪ್ರಬಂಧವನ್ನು ಮಂಡಿಸುವ ಉದ್ದೇಶ ಹಾಗು ಆಕಾಂಕ್ಷೆಯಿದೆ.

* [ಸ್ವಸಾ. ಅಭಿಪ್ರಾಯಗಳು ಪುಟ ೪೭೪]

## ಅಧ್ಯಾಯ – ೨

# ಅ. ಕಾದಂಬರಿ

ಬಹುತೇಕ ಕನ್ನಡ ಸಾಹಿತಿಗಳ ಮೇಲೆ ಇಂಗ್ಲಿಷ್ ಭಾಷೆಯ ಪ್ರಭಾವ ಆಗಿರುವುದನ್ನು ಕಾಣಬಹುದು. ಹಾಗೆಯೇ ಕನ್ನಡ ಸಾಹಿತ್ಯದ ಪ್ರಕಾರಗಳೂ ಸಹ ಇಂಗಿಷ್ ಪ್ರೇರಣೆಯಿಂದಲೇ ಮೂಡಿಬಂದವುಗಳಾಗಿವೆ. ಕನ್ನಡದ 'ಕಾದಂಬರಿ'ಯು ಇಂಗ್ಲಿಷ್‌ನಲ್ಲಿ Novel ಎಂದು ಕರೆಸಿಕೊಳ್ಳುವ ಗದ್ಯ ಸಾಹಿತ್ಯದ ಪ್ರತಿರೂಪವೇ ಆಗಿದೆ.

ಇಟಲಿಯನ್ ಭಾಷೆಯಲ್ಲಿ Novella ಎಂದರೆ ಒಂದು ಘಟನೆಯ ವರದಿ, ಕಥೆ, ನಿರೂಪಣೆ ಎಂದರ್ಥ. ಈ Novella ಎನ್ನುವುದೇ ಇಂಗ್ಲಿಷ್‌ನಲ್ಲಿ Novel ಆಯಿತು. ವಾಸ್ತವದ ಜೊತೆಗೆ ಕಲ್ಪನೆ (fiction) ಸೇರಿ ದೀರ್ಘ ಕಥನವಾಗಿ ಅದು Novel ಎಂದು ಕರೆಯಲ್ಪಟ್ಟಿತು.

ಕನ್ನಡದ ಗದ್ಯ ಕಥನವು 'ಕಾದಂಬರಿ ಎಂದು ಕರೆಯಿಸಿಕೊಂಡುದರ ಬಗ್ಗೆ ಸ್ವಾರಸ್ಯಪೂರ್ಣ ಹಿನ್ನೆಲೆಯಿದೆ. ಕ್ರಿ.ಶ. ೧೮೭೫ರಲ್ಲಿ ಚುರುಮುರಿಯವರು ಬಾಣಭಟ್ಟನಿಂದ ರಚಿತವಾದ ಗದ್ಯಕಾವ್ಯ 'ಕಾದಂಬರಿ'ಯನ್ನು ಹೊಸಗನ್ನಡದ ಗದ್ಯರೂಪದಲ್ಲಿ ಅನುವಾದಿಸಿದರು. ಅದರ ಕಥೆ, ಶೈಲಿ, ನಿರೂಪಣೆ, ಜೀವನ ದರ್ಶನ ಮುಂತಾದ ವಿಷಯಗಳು ಓದು ಬಲ್ಲ ಕನ್ನಡಿಗರ ಮನಸೂರೆಗೊಂಡಿತು. ಹಾಗಾಗಿ ನಂತರ ಬಂದ ಸ್ವಾರಸ್ಯಪೂರ್ಣ ಗದ್ಯಕೃತಿಗಳನ್ನು 'ಕಾದಂಬರಿ' ಎಂದು ಕರೆಯಲಾಯಿತು.

ಲೇಖಕ ತನ್ನ ಇಚ್ಛೆಯಾನುಸಾರ ಒಂದು ಕಥಾವಸ್ತುವನ್ನು ಅರಿಸಿಕೊಂಡು ಅದನ್ನು ತನ್ನ ಕಲ್ಪನಾ ಶಕ್ತಿಯಿಂದ ಒಂದು ಗದ್ಯ ಕಥನವನ್ನಾಗಿ ವಿಸ್ತೃತಗೊಳಿಸಿದಾಗ ಅದು ಕಾದಂಬರಿಯ ರೂಪ ಪಡೆಯುತ್ತದೆ.

* "ಕಾದಂಬರಿ ಎನ್ನುವುದು ಒಂದು ಕಲ್ಪನೆಯ ಸಾಹಿತ್ಯರೂಪ ಹಾಗೂ ಅದರ ಮೂಲ ರೂಪ ರಚನಾತ್ಮಕವಾದದ್ದು"

ರಾಬರ್ಟ್ ಸ್ಕೋಲ್ಸ್ "ಸಾಹಿತ್ಯದಲ್ಲಿ ಅನುಕೃತಿ ಎಂಬುದು ಇಲ್ಲವೇ ಇಲ್ಲ, ಇರುವುದು ಕಾವ್ಯ ಒಂದೇ, ಸಾಹಿತ್ಯ ದಾಖಲೆಯಲ್ಲ ರಚನೆ" ಎಂದು ಹೇಳಿದ್ದಾನೆ.

---

* ಜಿ.ಎಸ್. ಆಮೂರ "ಕನ್ನಡ ಕಥನ ಸಾಹಿತ್ಯ ಕಾದಂಬರಿ" ೧೯೯೪ ಪು ೧೨

ಗ್ಯಾಸೆಯ ಪ್ರಕಾರ "ಮಹಾಕಾವ್ಯವು ಸಹ ಕಲ್ಪನಾರೂಪವೇ, ಮಹಾಕಾವ್ಯದ ಕೇಂದ್ರವಸ್ತು ದಂತಕಥೆಯಾಗಿಹೋದ ನಿನ್ನೆಯಾದರೆ, ಕಾದಂಬರಿಯ ವಸ್ತು ವರ್ತಮಾನವೆಂದು ಗುರುತಿಸಲ್ಪಡುವ ಇವತ್ತು".

ಹೀಗೆ ಕಾದಂಬರಿಯ ಬಗ್ಗೆ ಪ್ರತಿಷ್ಠಿತ ವಿಮರ್ಶಕರು ಹಲವಾರು ವ್ಯಾಖ್ಯೆಗಳನ್ನು ನೀಡಿದ್ದಾರೆ. ಕಾದಂಬರಿಗೆ ಸೂಕ್ತ ಕಥಾವಸ್ತು ಎಷ್ಟೇ ಮುಖ್ಯವೋ ಅಷ್ಟೇ ಲೇಖಕನ ಕಲ್ಪನೆಯೂ ಮುಖ್ಯವಾಗಿರುತ್ತದೆ. ಇಲ್ಲದಿದ್ದರೆ ಕೇವಲ ಕಥಾವಸ್ತುವನ್ನಷ್ಟೇ ವಿಸ್ತೃತಗೊಳಿಸಿದರೆ ಅದು ಒಂದು ವರದಿಯಂತಾಗಿಬಿಡುತ್ತದೆ. ಕಾದಂಬರಿ ಒಂದು ಸೃಷ್ಟ್ಯಾತ್ಮಕ ಸೃಜನಶೀಲ ಕೃತಿ. ಒಂದು ಉತ್ತಮ ಕೃತಿಯನ್ನು ರಚಿಸಲು ಒಳ್ಳೆಯ ಕಥಾವಸ್ತುವಿನ ಆಯ್ಕೆ ಮುಖ್ಯವಾದುದೇನೋ ಸರಿ. ಆದರೆ ಯಾವುದೇ ಸೃಜನಶೀಲ ಲೇಖಕನೂ ಕಾದಂಬರಿ ಬರೆಯುವ ಉದ್ದೇಶದಿಂದ ಕಥಾವಸ್ತುವನ್ನು ಹುಡುಕಿಕೊಂಡು ಹೋಗುವುದಿಲ್ಲ. ತನ್ನ ಮನಸ್ಸಿನಲ್ಲಿ ಎಂದೋ ಮೊಳಕೆಯೊಡೆದ ವಿಷಯವೊಂದು ಕಥೆಗೆ ಆಧಾರವಾಗಿಬಿಡಬಹುದು. ಕೆಲವೊಮ್ಮೆ ಎಲ್ಲೋ ನೋಡಿದ ಕೇಳಿದ ವಿಷಯವೊಂದು ಬೃಹತ್ ಕಾದಂಬರಿಗೆ ಕಥಾವಸ್ತು ಆಗಿಬಿಟ್ಟಿರುತ್ತದೆ. ಗೋಪಾಲಕೃಷ್ಣ ಪೈ ಅವರನ್ನು ಭೇಟಿಯಾದಾಗ ತಿಳಿಸಿರುವಂತೆ ಹಾಸನದ ಬಳಿಯ ಗೊರೂರಿನಲ್ಲಿ ಹೇಮಾವತಿ ನದಿಗೆ ಅಣೆಕಟ್ಟು ಕಟ್ಟಿದಾಗ ಮುಳುಗಡೆಯಾದ ಸ್ಥಳದಿಂದ ನಿರ್ವಸತಿಗೊಂಡ ಜನರ ವಲಸೆ ಹೋಗುವ ಪ್ರಕ್ರಿಯೆ ಸ್ವತಃ ಕಂಡಾಗ ವಲಸೆಯ ಬಗ್ಗೆ ಒಂದು ಕಾದಂಬರಿಯನ್ನು ಬರೆಯಬೇಕೆಂಬ ಇಚ್ಛೆಯಾಯಿತಂತೆ. ಹಾಗಾಗಿ ಪೋರ್ಚುಗಲ್ ಆಕ್ರಮಣದಿಂದ ಝರ್ಝರಿತವಾಗಿ ದಕ್ಷಿಣಾಭಿಮುಖವಾಗಿ ವಲಸೆ ಹೋಗುವ ಸಾರಸ್ವತ ಸಮುದಾಯದ ಬಗ್ಗೆ ಹಲವಾರು ವರ್ಷಗಳು ಸಂಶೋಧನೆ ನಡೆಸಿ 'ಸ್ವಪ್ನ ಸಾರಸ್ವತ'ವನ್ನು ಬರೆದುದಾಗಿ ಹೇಳಿದ್ದಾರೆ.

ಕಾದಂಬರಿಗೆ ಆಧಾರವಾಗಿ ಯಾವುದೇ ಕಥಾವಸ್ತುವನ್ನು ಆರಿಸಿಕೊಂಡರೂ ಅದನ್ನು ಆಕರ್ಷಕಗೊಳಿಸಲು ಹಲವಾರು ಪಾತ್ರಗಳನ್ನು, ಸನ್ನಿವೇಶಗಳನ್ನು, ಸ್ಥಳಗಳನ್ನು, ಕುತೂಹಲ ಕೆರಳಿಸುವ ತಿರುವುಗಳನ್ನು ಲೇಖಕ ಸೃಷ್ಟಿಸಬೇಕಾಗುತ್ತದೆ. ಕಥೆಯು ಓದುಗರ ಕಣ್ಮುಂದೆ ನಡೆಯುತ್ತಿದೆಯೋ ಎಂಬಂತಹ ಭ್ರಮೆಯನ್ನು ಸೃಷ್ಟಿಸುವ ಚಾಣಾಕ್ಷತೆ ಲೇಖಕನಿಗಿರಬೇಕು. ಓದುಗರ ಆಸಕ್ತಿಯನ್ನು ಕೆರಳಿಸಿ, ಅವರ ಚಿತ್ತವನ್ನು ಹಿಡಿದಿಡುವಂತಹ ನೈಜ ಚಿತ್ರಣವನ್ನು ಮೂಡಿಸಬೇಕಾಗುತ್ತದೆ. ಕಾದಂಬರಿ ಒಂದು ದೀರ್ಘವಾದ ಗದ್ಯ ಬರವಣಿಗೆಯಾದ್ದರಿಂದ ಅದನ್ನು ಕೆಲವು ಅಧ್ಯಾಯಗಳನ್ನಾಗಿ ವಿಭಜಿಸಬೇಕಾಗುತ್ತದೆ.

ಒಂದು ಒಳ್ಳೆಯ ಕಾದಂಬರಿಯನ್ನು ರಚಿಸಬೇಕಾದರೆ ಕೆಲವು ಅಂಶಗಳನ್ನು ಗಮನದಲ್ಲಿಡಬೇಕಾಗುತ್ತದೆ. ಅರಿಸ್ಟಾಟಲ್ ತನ್ನ 'ಪೊಯೆಟಿಕ್ಸ್' ಕೃತಿಯಲ್ಲಿ ತಿಳಿಸಿರುವಂತೆ ಆರು ಮುಖ್ಯ ಅಂಶಗಳನ್ನು ಪರಿಗಣಿಸಬೇಕಾಗುತ್ತದೆ.

೧. ಸಂವಿಧಾನ
೨. ಪಾತ್ರಗಳು
೩. ಸಂಭಾಷಣೆ
೪. ಕ್ರಿಯೆಯ ಕಾಲ ಮತ್ತು ಸ್ಥಳ
೫. ಶೈಲಿ
೬. ಜೀವನ ದರ್ಶನ

**ಸಂವಿಧಾನ**

ಸಂವಿಧಾನವೆಂದರೆ ಒಂದು ನೀತಿ ನಿಯಮಗಳ ಚೌಕಟ್ಟಾಗಿರುತ್ತದೆ. ಹೇಗೆ ಒಂದು ದೇಶದ ಆಡಳಿತಕ್ಕೆ, ನ್ಯಾಯಾಂಗದ ಕಾರ್ಯಕ್ಕೆ ಕೆಲವು ಬೇಕು ಬೇಡಗಳ ನಿರ್ದಿಷ್ಟ ನಿಯಮಾವಳಿಗಳ ಸಂವಿಧಾನವಿರುತ್ತದೆಯೋ ಹಾಗೆಯೇ ಒಂದು ಕಾದಂಬರಿಗೂ ಸಹ ಸಂವಿಧಾನವಿರಬೇಕಾಗುತ್ತದೆ. ಕಾದಂಬರಿಯಲ್ಲಿ ಬರುವ ಪಾತ್ರಗಳು, ಸನ್ನಿವೇಶಗಳು, ವರ್ಣನೆಗಳು ಮುಂತಾದ ಪ್ರತಿಯೊಂದು ಅಂಶವೂ ಒಂದು ನಿಯಮದ ಚೌಕಟ್ಟಿನಲ್ಲಿ ಒಂದಕ್ಕೊಂದು ಸಂಬಂಧವಿದ್ದು ಕಥೆಗೆ ಪೂರಕವಾಗುವಂತೆ ಚಿತ್ರಿತವಾಗಬೇಕು. ಇಲ್ಲದಿದ್ದರೆ ಕಥೆಗೆ ಒಂದು ಬದ್ಧತೆ ಬರುವುದಿಲ್ಲ. ಉತ್ತಮವಾದ ಸಂವಿಧಾನದಿಂದ ಉತ್ತಮ ಕಾದಂಬರಿ ಮೂಡಿಬರುತ್ತದೆ. ಇಂತಹ ಸಂವಿಧಾನದ ನಿರ್ಮಾಣವು ಲೇಖಕನ ಪ್ರತಿಭೆಯ ಮೇಲೆ ನಿರ್ಭರವಾಗಿರುತ್ತದೆ. ಕುವೆಂಪು ಅವರು ಬರೆದದ್ದು 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು' ಎರಡೇ ಕಾದಂಬರಿಗಳಾದರೂ ಅವುಗಳಲ್ಲಿ ಮೂಡಿಬರುವ ಮಲೆನಾಡಿನ ಚಿತ್ರಣ, ಪಾತ್ರಗಳು, ಸನ್ನಿವೇಶಗಳು ಓದುಗರ ಮನದಲ್ಲಿ ಅಚ್ಚಳಿಯದಂತೆ ನಿಲ್ಲುತ್ತವೆ.

**ಪಾತ್ರಗಳು**

ಯಾವುದೇ ಕಥಾವಸ್ತುವಿಗೂ ಅದಕ್ಕೆ ಸಂಬಂಧಪಟ್ಟಂತೆ ಮೂಡಿಬರುವ ಪಾತ್ರಗಳೇ ಜೀವಾಳವಾಗಿರುತ್ತವೆ. ಲೇಖಕ ಚಿತ್ರಿಸುವ ಪಾತ್ರ ಎಷ್ಟೇ ಕಾಲ್ಪನಿಕ ಎಂದರೂ ಅದು ಯಾರಾದರೂ ಒಬ್ಬ ಜೀವಂತ ವ್ಯಕ್ತಿಯ ಪ್ರಭಾವದಿಂದಲೇ ಮೂಡಿಬಂದಿರುತ್ತದೆ. ಆದ್ದರಿಂದಲೇ ಕೆಲವು ಪಾತ್ರಗಳು ನಮಗೆ ತೀರ ಪರಿಚಿತವಾಗಿರುವಂತೆ ಭಾಸವಾಗುತ್ತವೆ. ಪಾತ್ರಗಳ ನಡೆ, ನುಡಿ, ಸ್ವಭಾವ, ಉಡುಗೆ ತೊಡುಗೆ ಪ್ರತಿಯೊಂದು ವಿಷಯವೂ ಓದುಗರ ಗಮನಸೆಳೆಯುತ್ತವೆ. ಕೆಲವು ಪಾತ್ರಗಳಂತೂ ಅಮರವಾಗಿ ಬಿಡುತ್ತವೆ. ತ್ರಿವೇಣಿಯವರ ಕಥಾನಾಯಕಿಯರನ್ನು ಇಲ್ಲಿ ಉದ್ಧರಿಸಬಹುದು. ಉದಾಹರಣೆಗೆ ಶರಪಂಜರದ ಕಾವೇರಿ.

ಪ್ರಮುಖ ಪಾತ್ರಗಳು, ಪೋಷಕ ಪಾತ್ರಗಳು, ಸಣ್ಣ ಪುಟ್ಟ ಇತರೆ ಪಾತ್ರಗಳು ಯಾವುದೇ ಇರಲಿ ಅವು ಕಥೆಗೆ ಪೂರಕವಾಗಿರುವಂತಿರಬೇಕು. ಅವುಗಳ ಧ್ಯೇಯ,

ಭಾವನೆ, ಆಲೋಚನೆಗಳು ಕಥೆಗೆ ತಕ್ಕನಾಗಿ ಮೂಡಿಬಂದಿರಬೇಕು. ಪಾತ್ರಗಳು ನೈಜರೂಪ ತಳೆದು ಓದುಗನ ಮನಸೆಳೆಯುವಂತೆ ಮೂಡಿಸುವುದು ಲೇಖಕನ ಕೈ ಚಳಕವಾಗಿರುತ್ತದೆ. ಇಂತಹ ಪಾತ್ರಗಳನ್ನು ಸೃಷ್ಟಿಸಲು ಲೇಖಕನಿಗೆ ಮನೋವಿಜ್ಞಾನದ ಪರಿಚಯವಿರಬೇಕು. ಹಾಗೆಯೇ ಪರಕಾಯ ಪ್ರವೇಶ ಮಾಡಿ ಪಾತ್ರಗಳು ಸಜೀವವಾಗಿ ಕಣ್ಮುಂದೆ ಮೂಡುವಂತೆ ಪಾತ್ರಚಿತ್ರಣ ಮಾಡುವಲ್ಲಿ ಲೇಖಕ ನಿಷ್ಣಾತನಾಗಿರಬೇಕು.

## ಸಂಭಾಷಣೆ

ಸಂಭಾಷಣೆ ಕಥೆಯನ್ನು ಆಕರ್ಷಕವಾಗಿಸಬಲ್ಲ ಸಾಧನವಾಗಿರುತ್ತದೆ. ಕಥೆಯ ಪಾತ್ರಗಳಿಗೆ ಒಪ್ಪುವಂತಹ ಸುಲಲಿತ ಸಂಭಾಷಣೆ ಕಥಾ ನಿರೂಪಣೆಯ ಏಕತಾನತೆಯನ್ನು ಕಳೆದು ಓದುಗನ ಮನೋಭಾವನೆಯನ್ನು ತಟ್ಟಿ ಸಂತೋಷವನ್ನುಂಟು ಮಾಡುತ್ತದೆ. ಇತ್ತೀಚೆಗಿನ ಕಾದಂಬರಿಗಳಲ್ಲಿ ಕೆಲವು ದ್ವಂದ್ವಾರ್ಥದ ಸಿನಿಮೀಯ 'ಡೈಲಾಗ್'ಗಳು ಸಂಭಾಷಣೆಯ ಪರಿಪೂರ್ಣತೆಗೆ ಕಪ್ಪುಮಸಿ ಬಳೆದಂತಿರುತ್ತವೆ. ಆದರೆ ಯಾವುದೇ ಪಾತ್ರಗಳ ವ್ಯಕ್ತಿತ್ವವನ್ನು ಬಿಂಬಿಸಲು ಒಳ್ಳೆಯ ಸಂಭಾಷಣೆ ಅವಶ್ಯಕವಾಗಿರುತ್ತದೆ. ಸಂಭಾಷಣೆ ಭಾಷಣದಂತಿರಬಾರದು ಹಾಗು ಲೇಖಕನ ಪಾಂಡಿತ್ಯ ಪ್ರದರ್ಶನದ ಸಾಧನವಾಗಿರದೆ ಅಚ್ಚುಕಟ್ಟಾಗಿ ಆಹ್ಲಾದಮಯವಾಗಿ ಮೂಡಿಬಂದೆರೆ ಕಥೆಯ ಸೊಗಸು, ರಸಾನುಭವ ದ್ವಿಗುಣವಾಗುತ್ತದೆ.

## ಕ್ರಿಯೆಯ ಕಾಲ ಮತ್ತು ಸ್ಥಳ

ಕಥೆ ಪೌರಣಿಕವೇ ಆಗಿರಲಿ, ಸಾಮಾಜಿಕವೇ ಆಗಿರಲಿ, ಅದು ನಡೆದ ಕಾಲ, ಸ್ಥಳ ಕಥೆಗೆ ತಕ್ಕಂತೆ ಸರಿಯಾಗಿ ಮೂಡಿಬರಬೇಕು. ಇದು ಕಥೆಗೆ ಒಂದು ಪರಿಸರದ ಆವರಣವನ್ನು ಸೃಷ್ಟಿಸುತ್ತದೆ. ಉದಾಹರಣೆಗೆ ಯುದ್ಧಭೂಮಿಯ ಸನ್ನಿವೇಶವಿದ್ದಲ್ಲಿ ಅದಕ್ಕೆ ಹೊಂದುವ ಪಾತ್ರಗಳ, ಸ್ಥಳಗಳ, ಉಡುಗೆ-ತೊಡುಗೆಗಳ ಚಿತ್ರಣ ಇರಬೇಕು. ದೇವಲೋಕದ ಪರಿಸರ ಮೂಡಿಸುವುದಾದರೆ ಇಂದ್ರನ ಸಭೆ, ದೇವತೆಗಳು, ಅಪ್ಸರೆಯರು ಮುಂತಾದ ಪ್ರತಿಯೊಂದು ಅಂಶಗಳ ಬಗ್ಗೆಯೂ ಗಮನ ನೀಡಬೇಕು. ೧೭ನೇ ಶತಮಾನದಲ್ಲಿ ಮೊಬೈಲ್‌ಗಳನ್ನು ಬಳಸುವುದಾಗಲಿ, ೨೦ನೇಯ ಶತಮಾನದಲ್ಲಿ ಕುದುರೆಗಳಲ್ಲಿ ಓಡಾಡುವುದನ್ನು ತೋರಿಸುವುದಾಗಲಿ ಮಾಡಿದರೆ ಅಭಾಸವಾಗುತ್ತದೆ. ಆದ್ದರಿಂದ ಕಥೆ ನಡೆಯುವ ಕಾಲಕ್ಕೆ ತಕ್ಕಂತೆ ಪ್ರತಿಯೊಂದು ವಿಷಯವು ಹೊಂದುವಂತೆ ಎಚ್ಚರವಹಿಸಬೇಕು.

## ಶೈಲಿ

ಶೈಲಿ ಎನ್ನುವುದು ಬಹಳ ವ್ಯಾಪ್ತಿ ಹೊಂದಿರುವ ಶಬ್ಧವಾಗಿದೆ. ಉಡುಪುಗಳ ಶೈಲಿ, ಮಾತನಾಡುವ ಶೈಲಿ ಹೀಗೆ ಒಂದೊಂದು ವಿಷಯಕ್ಕೂ ಪ್ರತ್ಯೇಕವಾದ ಶೈಲಿ

ಇರುವಂತೆಯೇ ಬರವಣಿಗೆಗೂ ಒಂದು ಶೈಲಿ ಇರುತ್ತದೆ. ಶಬ್ದಗಳ ಆಯ್ಕೆ, ಪದಪುಂಜಗಳ ಜೋಡಣೆ, ಲಯ, ವಿನ್ಯಾಸ ಮುಂತಾದ ಅಂಶಗಳನ್ನು ಪ್ರತಿಯೊಬ್ಬ ಲೇಖಕನೂ ವಿಭಿನ್ನ ರೀತಿಯಲ್ಲಿ ವ್ಯಕ್ತಪಡಿಸಿರುತ್ತಾನೆ. ಈ ಅಭಿವ್ಯಕ್ತಿಯೇ ಶೈಲಿ ಎಂದು ಕರೆಯಿಸಿಕೊಳ್ಳುತ್ತದೆ. ಒಂದು ವೇಳೆ ವಿವಿಧ ಲೇಖಕರ ಬರವಣಿಗೆಯಲ್ಲಿ ಬಹಳಷ್ಟು ಸಾಮ್ಯತೆ ಕಂಡು ಬಂದರೆ ಅದು ಅನುಕರಣೆಯಾಗಿ ಬಿಡುತ್ತದೆ, ಹಾಗಾಗಿ ಶೈಲಿಯು ಲೇಖಕನ ವೈಯಕ್ತಿಕ ಗುಣ, ಸ್ವತಂತ್ರ ಆಲೋಚನೆಯ ಕ್ರಮವನ್ನು ವ್ಯಕ್ತಪಡಿಸುವಂತಿರಬೇಕು. ಪ್ರತಿಷ್ಠಿತ ಸಾಹಿತಿಗಳು ತಮ್ಮದೇ ಆದ ಒಂದು ವಿಶಿಷ್ಟ ಶೈಲಿಯನ್ನು ಹೊಂದಿರುತ್ತಾರೆ. ಉದಾಹರಣೆಗೆ ದ.ರಾ. ಬೇಂದ್ರೆಯವರ, ಕುವೆಂಪುರವರ ಕವನಗಳ ಒಂದೆರಡು ಸಾಲು ಓದಿದರೆ ಸಾಕು ಅದು ಅವರ ಕೃತಿಯೇ ಎಂದು ಹೇಳಿ ಬಿಡಬಹುದು. ಒಬ್ಬ ಲೇಖಕನ ಕೃತಿಯು ಜನಪ್ರಿಯವಾಗಲು ಆತನ ಬರವಣಿಗೆಯ ಶೈಲಿಯೂ ಸಹ ಪ್ರಮುಖ ಕಾರಣವಾಗಿರುತ್ತದೆ.

### ಜೀವನ ದರ್ಶನ

ಯಾವುದೇ ಒಂದು ಕಥೆ, ಕವನ, ಲೇಖನವಾಗಿರಲಿ ಅದರಲ್ಲಿ ಒಂದು ಮೂಲ ಉದ್ದೇಶ ಅಡಗಿರುತ್ತದೆ. ಆ ಉದ್ದೇಶ ಸಮಾಜಕ್ಕೆ ಒಂದು ಸಕಾರಾತ್ಮಕ ಸಂದೇಶವನ್ನು ಕೊಡುವಂತಿರಬೇಕು. ಕೃತಿಗಳನ್ನು ಕೆಟ್ಟ ಕೃತಿ, ದುಷ್ಟ ಕೃತಿ ಹಾಗು ಶ್ರೇಷ್ಠ ಕೃತಿಗಳೆಂದು ವಿಂಗಡಿಸಬಹುದು. ಕೆಟ್ಟ ಕೃತಿ ಅಷ್ಟೇನೂ ಅಪಾಯಕಾರಿಯಾಗಿರುವುದಿಲ್ಲ. ಏಕೆಂದರೆ ಕೆಟ್ಟ ಕೃತಿ ರಚನೆಯ ಗುಣಮಟ್ಟದಲ್ಲಿ ಕಳಪೆಯಾಗಿದ್ದು ಓದುಗರಿಗೆ ಹಿಡಿಸದೆ ಇರಬಹುದು. ಅಂದರೆ ಕಥಾ ನಿರೂಪಣೆ, ಶೈಲಿ, ಭಾಷೆ ಮುಂತಾದ ಅಂಶಗಳು ನೀರಸನಾಗಿದ್ದು ಓದುಗರಿಗೆ ಮೆಚ್ಚುಗೆಯಾಗಿರುವುದಿಲ್ಲ. ಆದರೆ ದುಷ್ಟ ಕೃತಿಗಳು ಅಪಾಯಕಾರಿಗಳಾಗಿರುತ್ತವೆ. ಏಕೆಂದರೆ ಅವು ನಕಾರಾತ್ಮಕ ಸಂದೇಶಗಳನ್ನು ಸಾರುತ್ತಾ ಓದುಗರನ್ನು ಅಡ್ಡದಾರಿಗೆ ಎಳೆಯಬಲ್ಲವು. ದುಷ್ಟ ಪಾತ್ರಗಳನ್ನು, ಕುಕೃತ್ಯಗಳನ್ನು, ಕ್ರೌರ್ಯಗಳನ್ನು ವೈಭವೀಕರಿಸಿ ಸಮಾಜದ ಮೇಲೆ ಕೆಟ್ಟ ಪರಿಣಾಮವನ್ನು ಬೀರಬಲ್ಲವು. ಆದ್ದರಿಂದ ಲೇಖಕರಿಗೆ ಒಂದು ಸಾಮಾಜಿಕ ಪ್ರಜ್ಞೆ, ಜವಾಬ್ದಾರಿ ಇರಬೇಕು. ಯಾವುದೇ ಕಥಾವಸ್ತುವಿರಲಿ ಓದುಗನ ಮೇಲೆ ಸಕಾರಾತ್ಮಕ ಪ್ರಭಾವವನ್ನು ಬೀರುವ ಧ್ಯೇಯೋದ್ದೇಶವನ್ನು ಹೊಂದಿರಬೇಕು. ಇಂತಹ ಒಂದು ಒಳ್ಳೆಯ ಧ್ಯೇಯೋದ್ದೇಶವೇ ಜೀವನ ದರ್ಶನ ಎಂದೆನಿಸಿಕೊಳ್ಳುತ್ತದೆ. ಈ ಜೀವನದರ್ಶನ ನೇರವಾಗಿ ಉಪದೇಶದಂತೆ ವ್ಯಕ್ತವಾಗಿರುವುದಿಲ್ಲ. ಕಾದಂಬರಿಯ ಪಾತ್ರ ಚಿತ್ರಣ, ಸಂಭಾಷಣೆ, ಆವರಣ, ಶೈಲಿ ಮೊದಲಾದ ಪ್ರತಿಯೊಂದು ಅಂಶದಲ್ಲಿಯೂ ಬೆರೆತು ಅವಿನಾಭಾವವಾಗಿರುತ್ತದೆ. ಅದು ಪರೋಕ್ಷವಾಗಿ ತನ್ನ ಪ್ರಭಾವ ಬೀರುವಂತಿರಬೇಕು. ಹಾಗೆಂದು ಒಳ್ಳೆಯ ಪಾತ್ರಗಳಲ್ಲಿ ಭಕ್ತಿ, ವೈರಾಗ್ಯ, ತ್ಯಾಗ ಮುಂತಾದ ವಿಚಾರಗಳನ್ನೇ ತುಂಬಿಬಿಡಬಾರದು. ಹಾಗೆಯೇ ಕೆಟ್ಟ ಪಾತ್ರವೆಂದರೇ ಎಲ್ಲಾ ವಿಷಯಗಳಲ್ಲೂ ಕೆಟ್ಟವನಾಗಿಯೇ ಇರುತ್ತಾನೆಂದಲ್ಲ ಮಾನವ

ಸಹಜವಾದ ಅರಿಷಡ್ವರ್ಗಗಳು ಎಲ್ಲಾ ವ್ಯಕ್ತಿಗಳಲ್ಲೂ ಇರುತ್ತವೆ. ಅವುಗಳನ್ನು ಆತ ಎಷ್ಟರ ಮಟ್ಟಿಗೆ ಹತೋಟಿಯಲ್ಲಿಟ್ಟುಕೊಂಡು ಸಮಾಜದಲ್ಲಿ ಸಕಾರಾತ್ಮಕವಾಗಿ ಜೀವನ ನಡೆಸುತ್ತಾನೆ ಎಂಬುದು ಮುಖ್ಯ. ಒಟ್ಟಾರೆ ಒಂದು ಕೃತಿ ಸಮಾಜಕ್ಕೆ ಕೇಡು ತಾರದೆ ಒಂದು ಧನಾತ್ಮಕ ಸಂದೇಶವನ್ನು ಪರೋಕ್ಷವಾಗಿ ನೀಡುತ್ತದೆ ಎನ್ನುವುದೇ ಜೀವನ ದರ್ಶನವಾಗಿರುತ್ತದೆ.

ಈ ಮೇಲೆ ತಿಳಿಸಿರುವ ಆರು ಅಂಶಗಳಿಗೂ ಪ್ರಾಮುಖ್ಯತೆ ಕೊಟ್ಟು ಒಂದು ಕಾದಂಬರಿಯನ್ನು ರಚಿಸಿದರೆ ಅದು ಓದುಗರ ಮನಗೆಲ್ಲುವುದರಲ್ಲಿ ಸಂದೇಹವೇ ಇಲ್ಲ.

* ಒಟ್ಟಾರೆ ಕಾದಂಬರಿಯ ಸ್ವರೂಪವನ್ನು ಸಂಗ್ರಹ ರೂಪದಲ್ಲಿ ಈ ಕೆಳಕಂಡ ಅಂಶಗಳಲ್ಲಿ ವಿವರಿಸಬಹುದಾಗಿದೆ.

೧. ಕಾದಂಬರಿ ಕಲ್ಪನೆಯ ಒಂದು ಮಹತ್ವ ಪೂರ್ಣವಾದ ಆವಿಷ್ಕಾರವಾದ್ದರಿಂದ ಕಲ್ಪನೆಯ ಉದ್ದೇಶಗಳಾದ ಪರಿಷ್ಕಾರ ಮತ್ತು ಸಂಜ್ಞಾನ ಅದರ ಉದ್ದೇಶಗಳೂ ಆಗುತ್ತವೆ.

೨. ಆದರ್ಶ ಮತ್ತು ವಾಸ್ತವಗಳ ವಿಶಿಷ್ಟ ಸಂಯೋಗದಲ್ಲಿ ಕಾದಂಬರಿ ಹುಟ್ಟಿಕೊಳ್ಳುತ್ತದೆ. ಆದರೆ, ಕಾದಂಬರಿ ವಾಸ್ತವದ ಅನುಕರಣೆಯಲ್ಲ. ಅದಕ್ಕಿಂತ ಭಿನ್ನವಾದ ರಚನೆ. ಅದನ್ನು ಒಂದು ವ್ಯವಸ್ಥಿತವಾದ ಮಾದರಿ ಎಂದು ನೋಡಬೇಕೇ ವಿನಹ ಅನುಕೃತಿ ಎಂದಲ್ಲ.

೩. ಕಾದಂಬರಿಯ ಲಕ್ಷ್ಯ ಐತಿಹಾಸಿಕ ವರ್ತಮಾನದತ್ತ ಇರುವುದರಿಂದ ಅದು ಆದರ್ಶಭೂತದಲ್ಲಿಯೇ ನಂಬಿಕೆಯನ್ನಿಟ್ಟ ಮಹಾಕಾವ್ಯದಿಂದ ಭಿನ್ನವಾಗಿರುತ್ತದೆ.

೪. ಕಾದಂಬರಿ ಮಾನವನ ಮನಸ್ಸು ಮತ್ತು ಅವನಿರುವ ಜಗತ್ತು ಇವುಗಳ ಪರಸ್ಪರ ಸಂಬಂಧದ ಪರಿಣಾಮವಾಗಿರುವುದರಿಂದ ವಾಸ್ತವ ಮತ್ತು ಆದರ್ಶ ಇವುಗಳ ಕ್ರಿಯೆ-ಪ್ರತಿಕ್ರಿಯೆ ಅದರ ಜೀವಾಳವಾಗಿರುತ್ತದೆ. ಒಂದು ಕೃತಿಯ ವೈಯಕ್ತಿಕತೆ ಅದು ವಾಸ್ತವ ಮತ್ತು ಆದರ್ಶಗಳ ಬಗ್ಗೆ ಹೊಂದಿದ ತಿಳುವಳಿಕೆ ಮತ್ತು ಈ ತಿಳುವಳಿಕೆ ಅಭಿವ್ಯಕ್ತಿ ಹೊಂದುವ ರೀತಿ ಇವುಗಳನ್ನು ಅವಲಂಬಿಸಿದೆ.

೫. ಬದುಕಿನ ಅರ್ಥವನ್ನು ಪ್ರಕಟಗೊಳಿಸುವ ಮೂಲಕ ಕಾದಂಬರಿ ಸಾಮಾಜಿಕ ಅವಶ್ಯಕತೆಯಾಗಿ ಬಂದರೂ ಅದು ಇರುವಿಕೆಯಿಂದ ಓದುಗರನ್ನು ಬೇರ್ಪಡಿಸುವ ಮೂಲಕ ಅವನಿಗೆ ಪರಕೀಯತೆಯ ಅನುಭವವನ್ನೂ

---

* ಜಿ.ಎಸ್. ಆಮೂರ – ಕನ್ನಡ ಕಥನ ಸಾಹಿತ್ಯ : ಕಾದಂಬರಿ ೧೯೯೪ ಪುಟ ೧೫-೧೬

ತಂದುಕೊಡುತ್ತದೆ. ತನ್ನ ಕಲಾತ್ಮಕತೆಯನ್ನು ತಾನೇ ಎತ್ತಿ ತೋರಿಸುವುದು ಕಾದಂಬರಿಯ ಮುಖ್ಯ ಲಕ್ಷಣಗಳಲ್ಲೊಂದಾಗಿದೆ.

೬. ಸೃಜನಶೀಲತೆ ಮತ್ತು ಮೌಲ್ಯಾನ್ವೇಷಣೆಗಳು ಕಾದಂಬರಿಯ ರೀತಿಯನ್ನು ನಿರ್ಧರಿಸುತ್ತವೆ. ಸೃಷ್ಟಾತ್ಮಕ ವೈಚಾರಿಕತೆ ಅದರ ಇನ್ನೊಂದು ಮುಖ್ಯ ಲಕ್ಷಣ.

೭. ಕಾದಂಬರಿಯ ವಿಮರ್ಶೆ ಅದರ ವಿಶಿಷ್ಟ ಸ್ವರೂಪದ ಅರಿವಿನಿಂದ ಕೂಡಿರಬೇಕು. ಇಲ್ಲದೇ ಹೋದರೆ ಅದರ ಯಾವುದೊಂದು ಅಂಗದ ಬಗ್ಗೆ ಅವಾಸ್ತವ ಗಮನ ಕೊಡುವ ಮೂಲಕ ಅದು ಕೃತಿಯ ಬಗ್ಗೆ ಅಸತ್ಯ ಅಥವಾ ಅಪೂರ್ಣ ತಿಳುವಳಿಕೆಗೆ ಕಾರಣವಾಗುತ್ತದೆ.

## ಕನ್ನಡದಲ್ಲಿ ಮೊದಲ ಕಾದಂಬರಿಗಳು

ಕನ್ನಡಿಗರಿಗೆ ಮೊಟ್ಟ ಮೊದಲು ಕಾದಂಬರಿಯ ಪರಿಚಯವಾದುದು ಬಿ. ವೆಂಕಟಾಚಾರ್ಯರಿಂದ. ಅವರು ಬಂಗಾಳಿಯ ಬಂಕಿಮಚಂದ್ರರ 'ದುರ್ಗೇಶ ನಂದಿನಿ' ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದರು. ಹೀಗೆಯೇ ಅವರು ಭಾಷಾಂತರಿಸಿದ ಈಶ್ವರ ಚಂದ್ರ ವಿದ್ಯಾಸಾಗರ, ರಮೇಶಚಂದ್ರ ದತ್ತ ಅವರ ಕೃತಿಗಳು ಸಹ ಜನಪ್ರಿಯವಾದುವು. ನಂತರ ಗಳಗನಾಥರು ಕೆಲವು ಮರಾಠಿ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು.

ಕನ್ನಡದ ಪ್ರಪ್ರಥಮ ಸ್ವತಂತ್ರ ಕಾದಂಬರಿ ಎಂದರೆ 1895ರಲ್ಲಿ ರೆಂಟ್ಲ ವೆಂಕಟರಾವ್ ರಚಿಸಿದ 'ಕೇಸರಿ ವಿಲಾಸ' ಎಂದು ಹೇಳಲಾಗಿದೆ. ನಂತರ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ', ಎಂ.ಎಲ್. ಶ್ರೀಕಂಠೇಗೌಡರ 'ಕನ್ಯಾವಿತಂತು', ಬೋಳಾರ ಬಾಬುರವರ 'ವಾಗ್ದೇವಿ', ಹೀಗೆ ಒಂದಾದ ನಂತರ ಒಂದಾಗಿ ಕಾದಂಬರಿಗಳು ಪ್ರಕಟವಾಗತೊಡಗಿದುವು. ವೆಂಕಟಕೃಷ್ಣರ 'ಚೋರಗ್ರಹಣದ ತಂತ್ರ' ಕನ್ನಡದ ಮೊದಲನೇಯ ಪತ್ತೇದಾರಿ ಕಾದಂಬರಿಯಾಗಿದೆ. ಇಪ್ಪತ್ತನೇಯ ಶತಮಾನದ ಆದಿಯಲ್ಲಿ ಸ್ವಾತಂತ್ರ್ಯ ಪೂರ್ವದ ಲೇಖಕರಾದ ಆನಂದ ಕಂದ, ಶಿವರಾಮ ಕಾರಂತ, ಅ.ನ.ಕೃ., ವಿ.ಕೃ. ಗೋಕಾಕ, ಕುವೆಂಪು, ಮಿರ್ಜಿ ಅಣ್ಣಾರಾಯ, ಮಾಸ್ತಿ ಮುಂತಾದವರ ಕಾದಂಬರಿಗಳು ಶ್ರೇಷ್ಠತೆ ಪಡೆದುವು. ಸ್ವಾತಂತ್ರ್ಯೋತ್ತರದಲ್ಲಿ ಬಸವರಾಜ ಕಟ್ಟೀಮನಿ, ನಿರಂಜನ, ತ.ರಾ.ಸು., ವಿ.ಎಂ. ಇನಾಂದಾರ್ ಮೊದಲಾದವರ ಕ್ರಾಂತಿಕಾರಿ ಕಾದಂಬರಿಗಳು ಪ್ರಚಲಿತವಾದುವು. ಲೇಖಕಿಯರು ಸಹ ಹೆಚ್ಚಿನ ಸಂಖ್ಯೆಯಲ್ಲಿ ಬರೆಯತೊಡಗಿದರು ತ್ರಿವೇಣಿ, ಅನುಪಮ, ಎಂ.ಕೆ. ಇಂದಿರಾ, ಜಯಲಕ್ಷ್ಮಿ ದೇವಿ, ಆರ್ಯಾಂಬ ಪಟ್ಟಾಭಿ, ರಾಜಲಕ್ಷ್ಮಿ ಮೊದಲಾದವರು ಉತ್ತಮ ಕೃತಿಗಳನ್ನು ರಚಿಸಿದರು.

ನಾಗರಿಕತೆ ಮುಂದುವರೆದಂತೆ ಬದಲಾಗುತ್ತಾ ಹೋದ ಮಾನವನ ಆಚಾರ–ವಿಚಾರ, ಜೀವನಶೈಲಿಯನ್ನು, ಬಿಂಬಿಸುವ ಅನಂತಮೂರ್ತಿಯವರ 'ಸಂಸ್ಕಾರ',

ಭೈರಪ್ಪನವರ 'ದಾಟು', 'ಧರ್ಮಶ್ರೀ', 'ವಂಶವೃಕ್ಷ' ದಂತಹ ಸಾಮಾಜಿಕ ಕಾದಂಬರಿಗಳು ಚರ್ಚೆಗೂ ಒಳಗಾದುವು.

ಒಟ್ಟಾರೆ ಜೀವನದ ಜಟಿಲತೆ, ಸಂಕೀರ್ಣತೆ ರಹಸ್ಯಾತ್ಮಕತೆಯ ವಾಸ್ತವತೆ ಲೇಖಕರ ಕಲ್ಪನೆಯ ಮೂಸೆಯಲ್ಲಿ ಹದಗೊಂಡು ಒಂದು ದೀರ್ಘ ಕಥನವಾಗಿ ಮೂಡಿ ಬರುವ ಕಾದಂಬರಿಗಳು ಓದುಗರ ನೆಚ್ಚಿನ ಸಾಹಿತ್ಯ ಪ್ರಕಾರವಾಗಿದೆ. ಕಾದಂಬರಿಯ ಮುಖ್ಯ ಅಂಶಗಳಾದ ಸಂವಿಧಾನ, ಪಾತ್ರಗಳು, ಸಂಭಾಷಣೆ, ಕ್ರಿಯೆಯ ಕಾಲ ಮತ್ತು ಸ್ಥಳ, ಶೈಲಿ ಹಾಗೂ ಜೀವನದರ್ಶನವನ್ನು ಉನ್ನತ ಮಟ್ಟದಲ್ಲಿ ಬಿಂಬಿಸುವ ಗೋಪಾಲಕೃಷ್ಣ ಪೈರವರ 'ಸ್ವಪ್ನಸಾರಸ್ವತ' ಕಾದಂಬರಿಯನ್ನು ಎಂ.ಫಿಲ್. ಅಧ್ಯಯನಕ್ಕಾಗಿ ಆರಿಸಿಕೊಳ್ಳಲಾಗಿದೆ.

## ಆ. ಲೇಖಕರ ಪರಿಚಯ

ಮಾನ್ಯ ಶ್ರೀ ಗೋಪಾಲಕೃಷ್ಣ ಪೈ ಅವರನ್ನು ಖುದ್ದಾಗಿ ಭೇಟಿಯಾಗುವ ಸದವಕಾಶ ದೊರೆತಿದ್ದರಿಂದ ಅವರ ಬಗ್ಗೆ ಸಾಕಷ್ಟು ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಯಿತು.

ಗೋವೆಯಿಂದ ವಲಸೆ ಹೊರಟ ಸಾರಸ್ವತ ಸಮುದಾಯದ ಒಂದು ಕುಟುಂಬ ಕೇರಳದಲ್ಲಿರುವ ಈಗಿನ ಕಾಸರಗೋಡು ತಾಲ್ಲೂಕಿನ ಒಳಭಾಗದಲ್ಲಿರುವ ಬಳ್ಳಂಬೆಟ್ಟು ಸ್ಥಳದಲ್ಲಿ ನೆಲೆ ಊರಿತು. ಮಂಜುನಾಥ ಪೈ ಎಂಬುವವರು ಈ ಕುಟುಂಬದ ಮೂಲಪುರುಷ ಎಂಬ ದಾಖಲೆ ಲಭ್ಯವಿದೆ. ಇವರಿಗೆ ಹತ್ತು ಗಂಡುಮಕ್ಕಳಾಗಿದ್ದು, ಅವರಲ್ಲಿ ಆರನೇಯವರಾದ ಕೃಷ್ಣಪೈ ಅವರು ಬಳ್ಳಂಬೆಟ್ಟಿನ ಸಮೀಪವೇ ಇದ್ದ ಪೆರ್ಲ ಎಂಬ ಊರಿಗೆ ವ್ಯಾಪಾರದ ಸಲುವಾಗಿ ಹೋಗಿ ಅಲ್ಲೇ ನೆಲೆಸಿದರು. ಇವರ ಎರಡನೆಯ ಮಗ ಸುಬ್ರಾಯ ಪೈ ಅವರಿಗೆ ಮೂರನೇಯ ಗಂಡು ಮಗುವಾಗಿ ಗೋಪಾಲ ಕೃಷ್ಣ ಪೈ ಅವರು 25ನೇ ಮಾರ್ಚ್ 1947ರಂದು ಪೆರ್ಲದಲ್ಲಿ ಹುಟ್ಟಿದರು. ತಂದೆ, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಕೆಲವು ಕಾಲ ಜೈಲು ವಾಸದಲ್ಲೂ ಇದ್ದರು. ಅಪ್ಪಟ ಖಾದಿಧಾರಿಯಾದ, ಶಾಖಾಹಾರಿ ಆಗಿದ್ದ ಸುಬ್ರಾಯ ಪೈ ಗಾಂಧೀಜಿಯವರಿಂದ ಅತ್ಯಂತ ಪ್ರಭಾವಿತರಾದ ಕಾರಣ ಗೋಪಾಲ ಕೃಷ್ಣ ಪೈ ಅವರು ಅದೇ ಶಿಸ್ತಿನಲ್ಲಿಯೇ ತಮ್ಮ ಶೈಶವ್ಯವನ್ನು ಕಳೆದರು. ಅವರದು ಕೂಡು ಕುಟುಂಬ. ಹಾಗಾಗಿ ಬರುವ ಆದಾಯ ಜೀವನ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ಮನೆಯಲ್ಲಿ ಬಡತನವಿದ್ದರೂ ಪೈ ಅವರಿಗೆ ಅದೇ ಹಳ್ಳಿಯಲ್ಲಿದ್ದ ಗಾಂಧೀಜಿಯವರ ಆದರ್ಶಗಳನ್ನು ಮೈಗೂಡಿಸಿಕೊಂಡ ಸತ್ಯನಾರಾಯಣ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಲು ತೊಂದರೆಯಾಗಲಿಲ್ಲ. ಪೈ ಅವರು ದೈಹಿಕವಾಗಿ ಸದೃಢವಾಗಿರಲಿಲ್ಲವಾದ್ದರಿಂದ ಆಟ ಓಟಗಳಲ್ಲಿ ಹಿಂದೆ ಉಳಿದರು. ಹಾಗಾಗಿ ತಮ್ಮ ಬಿಡುವಿನ ವೇಳೆಯಲ್ಲಿ ಸ್ಥಳೀಯ ಗ್ರಂಥಾಲಯದ ಪುಸ್ತಕಗಳನ್ನು ಓದುವ ಹವ್ಯಾಸ ರೂಢಿಸಿಕೊಂಡರು. ರಾತ್ರಿ ಮಲಗುವಾಗ ಅಕ್ಕಂದಿರು ಹೇಳುತ್ತಿದ್ದ ಕಥೆಗಳನ್ನು ಕೇಳುತ್ತಾ ಸಾಹಿತ್ಯದಲ್ಲಿ ಒಲವು ಮೂಡಿತು. 1963ರಲ್ಲಿ ಎಸ್.ಎಸ್.ಎಲ್.ಸಿ. ಮುಗಿಸಿ

ಪಿ.ಯು.ಸಿ.ಗೆ ಪುತ್ತೂರಿನ ವಿವೇಕಾನಂದ ಕಾಲೇಜಿಗೆ ಸೇರಿದರು. ಶಾಲೆಯಲ್ಲಿದ್ದಾಗಲೇ ಪೆರ್ಲ ಕೃಷ್ಣ ಭಟ್ ಎಂಬ ಪ್ರಸಿದ್ಧ ಸಾಹಿತಿ ಹಾಗೂ ಯಕ್ಷಗಾನ ಅರ್ಥಧಾರಿಯವರ ಶಿಷ್ಯರಾಗಿದ್ದರು. ನಂತರ ಪುತ್ತೂರಿನಲ್ಲಿ ಶಿವರಾಮಕಾರಂತ, ಉಗ್ರಾಣ ಮಂಗೇಶರಾಯರು, ಬೆಳ್ಳೆ ರಾಮಚಂದ್ರರಾಯರು ಮುಂತಾದ ಸಾಹಿತಿಗಳ ಪ್ರಭಾವ ಇವರ ಮೇಲೆ ಸಾಕಷ್ಟಾಯಿತು. ಕಾಲೇಜಿನಲ್ಲಿರುವಗಲೇ ಪೈ ಅವರು ಕಥೆ, ಕವನಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಆದರೆ ವ್ಯಾಪಾರಿ ಕುಟುಂಬಕ್ಕೆ ಸೇರಿದ್ದ ಇವರಿಗೆ ತಾನು ಸಾಹಿತಿ ಎಂದು ಹೇಳಿಕೊಳ್ಳಲು ಧೈರ್ಯ ಬರಲಿಲ್ಲ.

ಪದವಿಯ ವಿದ್ಯಾಭ್ಯಾಸಕ್ಕೆ ಮುಲ್ಕಿಯ ವಿಜಯಾ ಕಾಲೇಜು ಸೇರಿದಾಗ, ಅಲ್ಲಿ ಪ್ರೊ. ರಾಮದಾಸ್ ಮತ್ತು ಪ್ರೊ. ರಘುನಾಥರಾವ್ ಎಂಬುವವರ ಶಿಷ್ಯನಾಗುವ ಸುಯೋಗ ಒದಗಿತು. ರಾಮದಾಸರು ಆಗ ಪ್ರಚಲಿತವಾಗಿದ್ದ ನವ್ಯಸಾಹಿತ್ಯದ ಪರಿಚಯವನ್ನು ಮಾಡಿಕೊಟ್ಟದ್ದಲ್ಲದೇ ನವ್ಯ ಸಾಹಿತ್ಯದ ಆದ್ವರ್ಯು ಗೋಪಾಲಕೃಷ್ಣ ಅಡಿಗರನ್ನು ಭೇಟಿ ಮಾಡಿಸಿದರು. ಹಾಗಾಗಿ ಪೈ ಅವರಿಗೆ ನವ್ಯ ಸಾಹಿತ್ಯದ ಪರಿಚಯವಾದುದಷ್ಟೇ ಅಲ್ಲ, ಅದರಲ್ಲಿ ಒಲವು ಕೂಡ ಮೂಡಿತು.

1969ರಲ್ಲಿ ಪದವಿ ಮುಗಿಸಿದ ಪೈರವರು ಕೆನರಾ ಬ್ಯಾಂಕ್‌ನಲ್ಲಿ ಉದ್ಯೋಗಕ್ಕೆ ಸೇರಿ ಬೆಂಗಳೂರಿಗೆ ಬಂದರು. ಅದೃಷ್ಟವಶಾತ್ ಆ ಸಮಯಕ್ಕೆ ಸರಿಯಾಗಿ ಅಡಿಗರು ಸಹ ಬೆಂಗಳೂರಿಗೆ ಬಂದ ಕಾರಣ ಪೈರವರ ಸಾಹಿತ್ಯಾಭ್ಯಾಸವು ವಿಸ್ತೃತವಾಗಿ ನಡೆಯಿತು. ಆಗ ಭೇಟಿಯಾದ ಶ್ರೀ ಎಸ್. ದಿವಾಕರ್ ಎಂಬುವವರ ಮೂಲಕ ಸಾಹಿತ್ಯದ ಕುಸುರಿ ಕೆಲಸದತ್ತ ಹೆಚ್ಚು ಗಮನ ನೀಡುತ್ತಾ ಬರೆದ ಕಥೆಗಳನ್ನು ಒಗ್ಗೂಡಿಸಿ 1985ರಲ್ಲಿ 'ತಿರುವು' ಎಂಬ ಕಥಾ ಸಂಕಲವನ್ನು ಪ್ರಕಟಿಸಿದರು. ಸಣ್ಣ ಕಥೆಗಳಿಗೆ ಹೆಚ್ಚು ಒತ್ತು ಕೊಡುತ್ತಿದ್ದ ಪೈ ಅವರು 2000ದಲ್ಲಿ 'ಈ ಬೆರಳ ಗುರುತು' ಹಾಗೂ 2006ರಲ್ಲಿ 'ಹಾರುವ ಹಕ್ಕಿಯ ಗೂಡಿನ ದಾರಿ' ಕಥಾ ಸಂಕಲನಗಳನ್ನು ಪ್ರಕಟಿಸಿದರು. ಈ ಮಧ್ಯೆ ತಮ್ಮ ಸ್ವಂತ ಖರ್ಚಿನಲ್ಲಿ ಚೀನಾ ಪ್ರವಾಸ ಮಾಡಿದ ಪೈ ಅವರು 'ಆಧುನಿಕ ಚೀನೀ ಸಣ್ಣ ಕಥೆಗಳು' ಎಂಬ ಕಥಾ ಸಂಕಲನವನ್ನು ಪ್ರಕಟಿಸಿದರು. ಇದರಲ್ಲಿ ಹದಿನಾರು ಕಥೆಗಾರರ ಕಥೆಗಳಿದ್ದು ಇವರಲ್ಲಿ ಹದಿನಾಲ್ಕು ಲೇಖಕರು ಇನ್ನೂ ಅಕ್ಷರ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಇತ್ತೀಚೆಗೆ ಪೈ ಅವರು ಮಾರ್ಕ್‌ಟುಲ್ಲಿ ಅವರ 'India an unending journey' (ಭಾರತ ಒಂದು ಅಂತ್ಯವಿಲ್ಲದ ಯಾತ್ರೆ) ಹಾಗೂ ಆರ್.ಕೆ. ನಾರಾಯಣ್‌ರವರ 'Waiting for Mahatma' (ಮಹಾತ್ಮನನ್ನು ಕಾಯುತ್ತಾ) ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಗೋಪಾಲ ಕೃಷ್ಣ ಪೈ ಅವರು 1977ರಲ್ಲಿ ಮುಲ್ಕಿಯ ಕೊಲೆಕ್ಕಾಡಿ ಕಾಮತ್ ಕುಟುಂಬದ ಶ್ಯಾಮಲಾರನ್ನು ಮದುವೆಯಾಗಿ, 1979ರಲ್ಲಿ ಶ್ವೇತಾ ಮತ್ತು 1981ರಲ್ಲಿ ಸ್ಮಿತಾ ಎಂಬ ಹೆಣ್ಣುಮಕ್ಕಳನ್ನು ಪಡೆದರು. 2001ರಲ್ಲಿ ಶ್ಯಾಮಲಾರವರು ವಿಧಿವಶರಾದರು. ನಂತರ ಹೆಣ್ಣು ಮಕ್ಕಳ ಮದುವೆಯಾದ ಮೇಲೆ, ಈಗ ಪೈ ಅವರು ಬೆಂಗಳೂರಿನಲ್ಲಿ ಒಂಟಿ ಜೀವನ ನಡೆಸಿದ್ದಾರೆ.

---

ಪೈ ಅವರಿಗೆ ಸಾಹಿತ್ಯ ಮಾತ್ರವಲ್ಲದೆ ಸಿನಿಮಾದಲ್ಲಿಯೂ ಕೂಡ ಆಸಕ್ತಿ ಇದ್ದು, ದೇಶ ವಿದೇಶಗಳ ಕಲಾತ್ಮಕ ಚಿತ್ರಗಳನ್ನು ಅಭ್ಯಸಿಸಿದ್ದಾರೆ. ಶ್ರೀ ಗಿರೀಶ್ ಕಾಸರವಳ್ಳಿ ಅವರ 'ಕನಸೆಂಬ ಕುದುರೆಯನ್ನೇರಿ' ಎಂಬ ಚಲನಚಿತ್ರಕ್ಕೆ ಚಿತ್ರಕಥೆ ಬರೆದು ಜಂಟಿಯಾಗಿ ರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದಿದ್ದಾರೆ. ಶಿವರಾಮಕಾರಂತರ ಕಾದಂಬರಿ 'ಬೆಟ್ಟದ ಜೀವ' ಚಲನಚಿತ್ರಕ್ಕೂ ಸಂಭಾಷಣೆ ಬರೆದಿದ್ದಾರೆ. ಇತ್ತೀಚೆಗೆ 'ಉಜ್ವಾಡು' ಎಂಬ ಕೊಂಕಣಿ ಚಲನಚಿತ್ರಕ್ಕೆ ಚಿತ್ರಕಥೆ ಹಾಗೂ ಸಂಭಾಷಣೆ ಬರೆದಿದ್ದಾರೆ.

ತಮ್ಮ ವೃತ್ತಿ ಜೀವನದ ಒಂದು ಹಂತದಲ್ಲಿ ಹಾಸನದ ಬಳಿಯ ಗೊರೂರಿನಲ್ಲಿ ಹೇಮಾವತಿ ನದಿಗೆ ಅಣೆಕಟ್ಟು ಕಟ್ಟಿದಾಗ ಮುಳುಗಡೆಯಾದ ಸ್ಥಳದಿಂದ ನಿರ್ವಸತಿಗೊಂಡ ಜನರ ವಲಸೆ ಹೋಗುವ ಪ್ರಕ್ರಿಯೆಯನ್ನು ಕಣ್ಣಾರೆ ಕಂಡ ಪೈ ಅವರಲ್ಲಿ ವಲಸೆಯ ಬಗ್ಗೆ ಒಂದು ಕಥೆಯನ್ನು ಬರೆಯಬೇಕೆಂಬ ಬೀಜ ಅಂಕುರಿಸಿತು. ಅದರ ಫಲವಾಗಿ ಸಾರಸ್ವತ ಸಮುದಾಯ ಪೋರ್ಚುಗಲ್ ಆಕ್ರಮಣದಿಂದ ಝರ್ಝರಿತವಾಗಿ ದಕ್ಷಿಣಾಮುಖವಾಗಿ ವಲಸೆ ಹೋಗುವ ಕಥನವನ್ನೊಳಗೊಂಡ 'ಸ್ವಪ್ನ ಸಾರಸ್ವತ' ಕಾದಂಬರಿ ರೂಪುಗೊಂಡಿತು.

ಸಾರಸ್ವತ ಸಮುದಾಯದ 'ಭಗವದ್ಗೀತೆ' ಎಂದು ಕರೆಯಲಾಗುತ್ತಿರುವ ಈ ಬೃಹತ್ ಕಾದಂಬರಿಗೆ ಈಗಾಗಲೇ ಹಲವಾರು ಪ್ರಶಸ್ತಿ, ಪುರಸ್ಕಾರಗಳು ದೊರೆತಿವೆ. ಇತ್ತೀಚೆಗೆ ಪ್ರತಿಷ್ಠಿತ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ ಸಾಹಿತ್ಯ ಕ್ಷೇತ್ರದ ಅತ್ಯುನ್ನತ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿರುವುದು ಪೈರವರ ಹಿರಿಮೆಗೆ ಗರಿಮೆ ಮೂಡಿಸಿದೆ.



## ಅಧ್ಯಾಯ – ೩

# ಗೋವೆಯಲ್ಲಿ ಪೋರ್ಚುಗೀಸರ ಆಡಳಿತ

ಪೋರ್ಚುಗಲ್ ಅಟ್ಲಾಂಟಿಕ ಪ್ರದೇಶದ ಒಂದು ಪುಟ್ಟ ಯುರೋಪಿಯನ್ ದೇಶ. ಸಾವಿರಾರು ವರ್ಷಗಳ ಇತಿಹಾಸವಿರುವ ಈ ದೇಶವು ೧೫ನೇ ಶತಮಾನದಲ್ಲಿ ಒಂದು ಪ್ರಬಲದೇಶವಾಗಿ ಮೆರೆದಿತ್ತು. ದಕ್ಷಿಣ ಅಮೆರಿಕಾ, ಆಫ್ರಿಕಾ, ಏಷ್ಯಾ ಹಾಗು ಆಸ್ಟ್ರೇಲಿಯಾ ದೇಶಗಳ ಕೆಲವು ಪ್ರಾಂತ್ಯಗಳಲ್ಲಿ ಸ್ವತಃ ಆಡಳಿತವನ್ನು ಸಹ ನಡೆಸಿತ್ತು. ಹಡಗುಗಳನ್ನು ಕಟ್ಟುವ ಸಾಮರ್ಥ್ಯವನ್ನು ಹೊಂದಿದ್ದು, ಸ್ಪೇನ್ ದೇಶದೊಡಗೂಡಿ ಸಮುದ್ರದ ಮೂಲಕ ವ್ಯಾಪಾರವನ್ನು ನಡೆಸುತ್ತಾ ಸಾಕಷ್ಟು ಆರ್ಥಿಕ ಪ್ರಬಲತೆ ಪಡೆದಿತ್ತು. ಪೋರ್ಚುಗಲ್ಲಿನ ಅಂದಿನ ದೊರೆ ಸ್ಪೇನಿನ ಯುವರಾಣಿಯನ್ನು ಮದುವೆಯಾಗಿದ್ದರಿಂದ ಪೋರ್ಚುಗಲ್ಲಿನ ಮೇಲೆ ಸ್ಪೇನ್ ದೇಶದ ಪ್ರಭಾವ ಹೆಚ್ಚಾಗಿದ್ದು, ಕೆಲವು ವರ್ಷಗಳ ಕಾಲ ಸ್ಪೇನ್‌ದೇಶದ ಅಧೀನದಲ್ಲಿತ್ತು.

### ಅ. ಗೋವೆಯ ಇತಿಹಾಸ

ಗೋ ರಾಷ್ಟ್ರ – ಗೋವು – ಗೋವಾ ಭಾರತದ ಪೂರ್ವ ಕರಾವಳಿಯಲ್ಲಿರುವ ಒಂದು ಪುಟ್ಟ ರಾಜ್ಯ. ವಿಸ್ತೀರ್ಣದಲ್ಲಿ ಚಿಕ್ಕದ್ದಾಗಿದ್ದರೂ ಪೌರಾಣಿಕವಾಗಿಯೂ, ಚಾರಿತ್ರಿಕವಾಗಿಯೂ ಬಲು ದೊಡ್ಡ ಇತಿಹಾಸವನ್ನು ಹೊಂದಿದೆ. ವಿಷ್ಣುವಿನ ದಶಾವತಾರಗಳಲ್ಲಿ ಒಬ್ಬನಾದ ಪರಶುರಾಮ ಸಮುದ್ರತೀರದಲ್ಲಿ ಈ ಸ್ಥಳವನ್ನು ಸೃಷ್ಟಿಸಿದನು ಎನ್ನಲಾಗಿದೆ. ಹಾಗಾಗಿ ಅಪರೂಪದ ಪರಶುರಾಮ ದೇವಾಲಯವನ್ನು ಗೋವಾದಲ್ಲಿ ಕಾಣಬಹುದು. 'ಬೀಚ್‌ಗಳ ರಾಜ' ಎಂದು ಕರೆಸಿಕೊಳ್ಳುವ, 'ಪ್ರವಾಸಿಗರ ಸ್ವರ್ಗ' ಎಂದು ಪ್ರಚಲಿತವಾಗಿರುವ ಈ ಸುಂದರ ಪ್ರದೇಶ ಹಲವಾರು ರಾಜರ ಆಡಳಿತಕ್ಕೆ ಒಳಗಾಗಿತ್ತು. ಅಶೋಕನ ಸಾಮ್ರಾಜ್ಯದ ಒಂದು ಭಾಗವಾಗಿದ್ದ ಗೋವೆಯಲ್ಲಿ ಮೌರ್ಯರು (ಕ್ರಿ.ಪೂ. ೩೨೧–೧೮೫), ಸೈಥೋ ಪಾರ್ಥಿಯನ್ಸ್ (ಕ್ರಿ.ಪೂ. ೨–೪), ಅಭೀರಾ, ಭಾಟ್‌ಪುರ, ಭೋಜಾ (ಕ್ರಿ.ಸ. ೪–೬), ಬಾದಾಮಿ ಚಾಲುಕ್ಯರು (ಕ್ರಿ.ಶ. ೬–೮), ಮ್ಹಾಲಖೇಡ ರಾಷ್ಟ್ರಕೂಟರು (ಕ್ರಿ.ಶ. ೮–೧೦), ಕದಂಬರು (ಕ್ರಿ.ಶ. ೧೦–೧೨) ದೇವಗಿರಿ ಯಾದವರು (ಕ್ರಿ.ಶ. ೧೨–೧೩), ವಿಜಯನಗರದ ಅರಸರು (ಕ್ರಿ.ಶ. ೧೪–೧೫) ಹಾಗೂ ಬಹಮನಿ ಸುಲ್ತಾನರು ೧೫ನೇ ಶತಮಾನದಲ್ಲಿ ರಾಜ್ಯಾಭಾರ ಮಾಡಿದ್ದಾರೆ.

೧೪೯೮ರಲ್ಲಿ ವಾಸ್ಕೋ-ದ-ಗಾಮನ ಆಗಮನದಿಂದ ಭಾರತಕ್ಕೆ ಪೋರ್ಚುಗೀಸರ ಪ್ರವೇಶವಾದರೂ ಗೋವಾದಲ್ಲಿ ೧೫೪೫ರಲ್ಲಿ ಅಧಿಕೃತವಾಗಿ ಪೋರ್ಚುಗೀಸರ ಆಡಳಿತ ಪ್ರಾರಂಭವಾಯಿತು. ೧೯೬೧ರಲ್ಲಿ ಸ್ವತಂತ್ರವಾದ ಗೋವಾ ಕೇಂದ್ರದ ಆಡಳಿತದಲ್ಲಿದ್ದು ೧೯೮೭ರ ಆಗಸ್ಟ್ ೧೨ ರಂದು ಪ್ರತ್ಯೇಕ ರಾಜ್ಯವಾಯಿತು.

## ಆ. ಭಾರತಕ್ಕೆ ಪೋರ್ಚುಗೀಸರ ಆಗಮನ

ಪೋರ್ಚುಗಲ್ಲಿನ ದೊರೆ ಎರಡನೇ ಜೋವೋ ತನ್ನ ದೇಶವನ್ನು ರಾಜಕೀಯ ಹಾಗು ಆರ್ಥಿಕವಾಗಿ ಮತ್ತಷ್ಟು ಸದೃಢ ಪಡಿಸಲು ತನ್ನ ವ್ಯಾಪಾರವನ್ನು ವಿಸ್ತರಿಸಲು ಬಯಸಿದನು. ಆ ಕಾರಣಕ್ಕಾಗಿ ಲಿಸ್ಬನ್ನಿನ ಗೌರ್ನರ್ ಆಗಿದ್ದ *ಎಸ್ತಾವೋನನ್ನು ಹೊಸ ಸ್ಥಳಗಳ ಅನ್ವೇಷಣೆಗೆ ಸಮುದ್ರಯಾನವನ್ನು ಕೈಗೊಳ್ಳಲು ಆಜ್ಞಾಪಿಸಿದನು. ಆದರೆ ಪ್ರಯಾಣಕ್ಕಾಗಿ ತಯಾರಿ ನಡೆಸುತ್ತಿರುವಾಗಲೇ ಎಸ್ತಾವೋ ಸಾವಿಗೀಡಾದನು. ನಂತರ ಈ ಜವಾಬ್ದಾರಿಯನ್ನು ದೊರೆ *ಪಾ ವೋ ಲೋನಿಗೆ ವಹಿಸಿದಾಗ ಆತ ನಿರಾಕರಿಸಿದನು.

## ವಾಸ್ಕೋ-ದ-ಗಾಮ

೧೪೬೦ರಲ್ಲಿ ಪೋರ್ಚುಗಲ್ಲಿನ ಪೋರ್ಟೋನಗರದ ಸೈನ್ ಜಿಲ್ಲೆಯಲ್ಲಿ ಜನಿಸಿದ ವಾಸ್ಕೋ-ದ-ಗಾಮ ಪ್ರೌಢನಾಗುತ್ತಿದ್ದಂತೆಯೇ ಅನ್ವೇಷಣೆಯ ಬೃಹತ್‌ಕಾರ್ಯ ನಿರ್ವಹಿಸಲು ಮುಂದಾದನು. ೧೪೯೭ರಲ್ಲಿ ಜುಲೈ ೮ನೇ ತಾರೀಖಿನಂದು ಲಿಸ್ಬನ್‌ನಿಂದ ನಾಲ್ಕು ಹಡಗುಗಳ ನೌಕಾಪಡೆಯ ಜೊತೆ ಹೊರಟ ಆತ, ದ. ಆಫ್ರಿಕಾದ ಕೇಪ್ ಆಫ್ ಗುಡ್‌ಹೋಪನ್ನು ಬಳಸಿಕೊಂಡು ಮೊಂಬಾಸಾ, ಮೊಜಾಂಬಿಕ್, ಕೆನ್ಯಾ ಮೊದಲಾದ ಆಫ್ರಿಕಾ ದೇಶಗಳಿಗೆ ಭೇಟಿಕೊಟ್ಟು ತನ್ನ ಸಮುದ್ರಯಾನವನ್ನು ಮುಂದುವರಿಸಿದನು. ಅಲ್ಲಿ ಕೆಲವೆಡೆ ಮುಸ್ಲಿಂ ವ್ಯಾಪಾರಿಗಳು ಈತನನ್ನು ವಿರೋಧಿಸಿದ್ದರಿಂದ ಸಣ್ಣ ಹೋರಾಟಗಳು ಸಹ ನಡೆದುವು.

೧೪೯೮ರ ಮೇ ೨೦ ರಂದು ವಾಸ್ಕೋ-ದ-ಗಾಮ ಭಾರತ ದೇಶದ *ಕ್ಯಾಲಿಕಟ್ ಬಂದರು ನಗರವನ್ನು ತಲುಪಿದನು. ಅಲ್ಲಿನ ಯಥೇಚ್ಛ ಸಾಂಬಾರು ಪದಾರ್ಥಗಳ ನೈಸರ್ಗಿಕ ಸಂಪತ್ತು ಆತನ ಮನಸೂರೆಗೊಂಡಿತು. ಕ್ಯಾಲಿಕಟ್‌ನ ರಾಜ ಜಮೊರಿನ್ ಮೊದಲಿಗೆ ವಾಸ್ಕೋ-ದ-ಗಾಮನನ್ನು ಆದರದಿಂದಲೇ ಬರಮಾಡಿಕೊಂಡರೂ ನಂತರ ಆತನ ದುರಾಸೆಯನ್ನು ಅರಿತು ಹೆಚ್ಚಿನ ಆತಿಥ್ಯ ನೀಡಲು ಹಿಂಜರಿದನು. ಇದರ ಜೊತೆಗೆ ಅದಾಗಲೇ ಅಲ್ಲಿ ವ್ಯಾಪಾರ ನಡೆಸುತ್ತಿದ್ದ ಮುಸ್ಲಿಂ ವ್ಯಾಪಾರಿಗಳು ಸಹ ವಾಸ್ಕೋ-ದ-ಗಾಮನ ಆಗಮನವನ್ನು ವಿರೋಧಿಸಿದಾಗ ಜಮೊರಿನ್ ಮತ್ತಷ್ಟು ಎಚ್ಚೆತ್ತನು.

ವಾಸ್ಕೋ-ದ-ಗಾಮ ತನ್ನ ಸಶಸ್ತ್ರ ಪಡೆಯಿಂದ ತನ್ನನ್ನು ಎದುರಿಸಿದವರನ್ನು ಬೆದರಿಸಿ, ಹೆಚ್ಚಿನ ವಿರೋಧ ವ್ಯಕ್ತಪಡಿಸಿದವರನ್ನು ಕೊಂದುಹಾಕಿದನು. ಮೆಣಸು,

---

* ಎಸ್ತಾವೋ-ವಾಸ್ಕೋ-ದ-ಗಾಮನ ತಂದೆ
* ಪಾ ವೋ ಲೋ ವಾಸ್ಕೋ-ದ-ಗಾಮನ ಅಣ್ಣ

ಯಾಲಕ್ಕಿ ಸೇರಿದಂತೆ ಇತನ ಸಾಂಬಾರ ಪದಾರ್ಥಗಳನ್ನು ತನ್ನ ನೌಕೆಗಳಲ್ಲಿ ತುಂಬಿಸಿಕೊಂಡು ಹೊರಟಾಗ ಜಮ್ಹೊರಿನ್ ಹೆಚ್ಚಿನ ತೆರಿಗೆ ವಿಧಿಸಿ ಆತ ಯಾವುದೇ ಪದಾರ್ಥವನ್ನು ತೆಗೆದುಕೊಂಡು ಹೋಗದಂತೆ ತಡೆದನು. ಆಗ ವಾಸ್ಕೋ-ದ-ಗಾಮ ತನ್ನ ಮುಂದಿನ ಪ್ರಯಾಣದಲ್ಲಿ ಮುತ್ತು, ಹವಳ, ಮಕಮಲ್ ಬಟ್ಟೆಗಳನ್ನು ತಂದುಕೊಡುವುದಾಗಿ ರಾಜನಿಗೆ ಆಮಿಷ ತೋರಿಸಿ ಜಾಣ್ಮೆಯಿಂದ ನುಣುಚಿಕೊಂಡನು. ೧೪೯೮ರ ಆಗಸ್ಟ್ ತಿಂಗಳಿನಲ್ಲಿ ತನ್ನ ದೇಶಕ್ಕೆ ಮರುಪ್ರಯಾಣ ಬೆಳೆಸಿದ ವಾಸ್ಕೋ-ದ-ಗಾಮ ೧೪೯೯ರ ಸೆಪ್ಟಂಬರ್ ತಿಂಗಳಿನಲ್ಲಿ ಲಿಸ್ಬನ್ ಸೇರಿದನು. ಅಲ್ಲಿ ಆತನಿಗೆ ಅದ್ದೂರಿಯ ಸ್ವಾಗತ ದೊರೆಯಿತು. ಭಾರತದ ಸಾಂಬಾರ ಪದಾರ್ಥಗಳಿಗೆ ಎಂದಿಗಿಂತ ಅರವತ್ತು ಪಟ್ಟು ಹೆಚ್ಚು ಲಾಭ ದೊರೆತಾಗ ಮುಂದೆ ಭಾರತದ ಪೂರ್ವ ಕರಾವಳಿ ಪ್ರದೇಶವನ್ನು ತಮ್ಮ ವ್ಯಾಪಾರದ ಮುಖ್ಯ ಕೇಂದ್ರವನ್ನಾಗಿಸಿಕೊಳ್ಳಲು ದೊರೆ ನಿರ್ಧರಿಸಿದನು. ೧೫೦೦ರಲ್ಲಿ ಪೋರ್ಚುಗಲ್ಲಿನ ಪೆಡ್ರೋ ಅಲ್ವಾರಸ್ ಕಾಬ್ರಲ್ ಎಂಬುವವನು ಸಹ ಕ್ಯಾಲಿಕಟ್‌ಗೆ ಬಂದು ಹೆಚ್ಚಿನ ಯಶಸ್ಸು ಕಾಣದೆ ಹಿಂತಿರುಗಿದನು.

೧೫೦೨ರ ಅಕ್ಟೋಬರ್ ೩೦ನೇ ದಿನಾಂಕದಂದು ಮತ್ತೇ ಕ್ಯಾಲಿಕಟ್‌ಗೆ ಬಂದಿಳಿದ ವಾಸ್ಕೋ-ದ-ಗಾಮ ಮುಸ್ಲಿಂರ ವಿರೋದವನ್ನೆದುರಿಸಲು ಸಾಕಷ್ಟು ಹಡಗುಗಳು ಹಾಗು ಸೈನಿಕರೊಡನೆ ಹೋರಾಟಕ್ಕೆ ತಯಾರಾಗಿಯೇ ಬಂದನು. ತನ್ನ ಹಿಂದಿನ ಪ್ರಯಾಣದ ಸಮಯ ತನ್ನನ್ನು ಎದುರಿಸಿದ್ದ ಮೂವತ್ತು ಮೀನುಗಾರರನ್ನು ನೇಣುಗಂಬಕ್ಕೇರಿಸಿದನು. ಹಾಗೆಯೇ ಮುಸ್ಲಿಮರ ಮೇಲೆ ಸೇಡು ತೀರಿಸಿಕೊಳ್ಳಲು ಮೆಕ್ಕಾದಿಂದ ಮುನ್ನೂರ ಎಂಬತ್ತು ಪ್ರಯಾಣಿಕರಿದ್ದ ಹಡಗಿಗಾಗಿ ಕಾದಿದ್ದು, ಅದು ದಡ ತಲುಪುವ ಮೊದಲೇ ಅದಕ್ಕೆ ಬೆಂಕಿ ಹತ್ತಿಸಿದನು. ಸಮುದ್ರದ ಮಧ್ಯೆ ಮೂರು ದಿನಗಳಷ್ಟು ನಿರಂತರ ದಹಿಸುತ್ತಾ ಅದರಲ್ಲಿದ್ದ ಮಕ್ಕಳು, ಸ್ತ್ರೀ-ಪುರುಷರು ದಾರುಣವಾಗಿ ಮರಣವನ್ನಪ್ಪುವಂತಾಯಿತು. ಈತನ ಇಂತಹ ಅಮಾನವೀಯ ಕ್ರೌರ್ಯವನ್ನು ಕಂಡ ಸ್ಥಳೀಯ ಜನರು ಅಂದಿನಿಂದಲೇ ಪೋರ್ಚುಗೀಸರ ಬಗ್ಗೆ ಭಯಭೀತರಾಗಲಾರಂಭಿಸಿದರು. ಕರಾವಳಿಯುದ್ಧಕ್ಕೂ ಪ್ರಯಾಣಿಸುತ್ತಾ ಗೋವೆಯನ್ನು ತಲುಪಿದ ವಾಸ್ಕೋ-ದ-ಗಾಮ ನಿರ್ಭೀತನಾಗಿ ಸಾಂಬಾರ ಪದಾರ್ಥಗಳನ್ನು ತನ್ನ ದೇಶಕ್ಕೆ ರವಾನಿಸಲಾರಂಭಿಸಿದನು. ಪೋರ್ಚುಗಲ್‌ನಿಂದ ಹೆಚ್ಚಿನ ಸಂಖ್ಯೆಯಲ್ಲಿ ಹಡಗುಗಳು ಬರಲಾರಂಭಿಸಿದುವು. ಭಾರತದಲ್ಲಿ ಪೋರ್ಚುಗೀಸರ ಆಗಮನಕ್ಕೆ ಅಡಿಪಾಯಹಾಕಿಕೊಟ್ಟ ವಾಸ್ಕೋ-ದ-ಗಾಮ ೧೫೨೪ರ ಡಿಸೆಂಬರ್ ೨೪ರಂದು ಕೊಚ್ಚಿನ್ ನಗರದಲ್ಲಿ ಕೊನೆಯುಸಿರೆಳೆದನು. ಆತನ ಕಳೇಬರವನ್ನು ಲಿಸ್ಬನ್ನಿಗೆ ರವಾನಿಸಲಾಯಿತು.

* ಪೋರ್ಚುಗೀಸರ ಆಗಮನದ ಮೊದಲೇ ಚೀನಿಯರು, ಜಾವಾ, ಸುಮಾತ್ರ ದೇಶದವರು, ಆಫ್ರಿಕನ್ನರು, ಅರಬರು ಸಹ ಸಾಂಬಾರು ಪದಾರ್ಥಗಳಿಗಾಗಿ ಭಾರತದ ಕರಾವಳಿ ಪ್ರದೇಶಗಳಿಗೆ ಬರುತ್ತಿದ್ದರಾದರೂ ಯಾರೂ ಸ್ಥಳೀಯ ಜನರ ಮೇಲಾಗಲಿ, ಸ್ಥಳಗಳ ಮೇಲಾಗಲಿ ಆಡಳಿತ ನಡೆಸಲು ಮುಂದಾಗಲಿಲ್ಲ.

---

* K.M. Panikkar, Malabar & The Portuguese

### ಇ. ಗೋವೆಯಲ್ಲಿ ಪೋರ್ಚುಗೀಸರ ನೆಲೆ

೧೫೦೫ರಲ್ಲಿ ಫ್ರಾನ್ಸಿಸ್ಕೊ-ದ-ಅಲ್ಮೆಡಾ ಎಂಬುವನು ವೈಸ್‌ರಾಯ್ ಆಗಿ ನೇಮಕಗೊಂಡು ಕೊಚ್ಚಿನ್‌ನಲ್ಲಿ ನೆಲೆಸಿದನು. ಪೋರ್ಚುಗಲ್ಲಿನ ದೊರೆ ಅಲ್ಮೆಡಾನಿಗೆ ಅಂಜದೀವ, ಕ್ಯಾನನೋರ್, ಕೊಚ್ಚಿನ್ ಮತ್ತು ಕ್ವಿಲಾನ್‌ಗಳಲ್ಲಿ ಕೋಟೆ ಕಟ್ಟಬೇಕೆಂದು ಆಜ್ಞಾಪಿಸಿದ್ದನು. ಹಾಗಾಗಿ ಅಲ್ಮೆಡಾ ಹೋರಾಟ ನಡೆಸುತ್ತಾ ಒಂದೊಂದೇ ಸ್ಥಳವನ್ನು ವಶಪಡಿಸಿಕೊಳ್ಳುತ್ತಾ 'ವೈಸ್‌ರಾಯಲ್ಟಿ ಆಫ್ ಇಂಡಿಯಾ – ಪೋರ್ಚುಗೀಸ್ ಸ್ಟೇಟ್ ಆಫ್ ಇಂಡಿಯಾ' ಎಂದು ಪೋರ್ಚುಗೀಸ್ ಆಡಳಿತವನ್ನು ಸ್ಥಾಪಿಸುತ್ತಾ ಹೊರಟನು, ಈತನ ಮಗ ಲೋರೆಂಕೋ-ದೆ ಅಲ್ಮೆಡಾ ಸಹ ತಂದೆಯ ಜೊತೆ ಕೈಜೋಡಿಸಿ ದಾಮನ್-ದಿಯೋ, ದಾದರ್-ನಾಗರ್ ಹವೇಲಿಯನ್ನು ವಶಪಡಿಸಿಕೊಂಡರು. ಜಮೋರಿನ್ ರಾಜನ ಜೊತೆ ಯುದ್ಧ ಹೂಡಿ ಕ್ಯಾಲಿಕಟ್, ಕ್ಯಾನ್‌ನೋರ್‌ಗಳನ್ನು ಗೆದ್ದುಕೊಂಡ ಲೋರೆಂಕೋ ದಿಯೋವನ್ನು ವಶಪಡಿಸಿಕೊಳ್ಳುವಾಗ ಅಸುನೀಗಿದನು.

೧೫೧೦ರಲ್ಲಿ ಆಪೋಸ್ಸೂ-ದ-ಅಲ್ಬುಕೇರ್ಕ್ ಗೋವೆಗೆ ಬಂದು ಅಲ್ಲಿ ಆಡಳಿತ ನಡೆಸುತ್ತಿದ್ದ ಬಿಜಾಪುರದ ಬಹಮನಿ ಸುಲ್ತಾನನ ಜೊತೆ ಹೋರಾಟಕ್ಕಿಳಿದು ಸೋತುಹೋದನು. ಕೆಲವೇ ತಿಂಗಳುಗಳಲ್ಲಿ ಸುಲ್ತಾನನು ಸಾವಿಗೀಡಾಗಿ ಮುಸಲ್ಮಾನ ಸೈನ್ಯ ದುರ್ಬಲವಾಗಿದ್ದನ್ನು ಕಂಡು ಅಲ್ಬುಕೇರ್ಕ್ ಸ್ಥಳೀಯ ಮುಖಂಡನಾದ ತಿಂಮೋಜನ ಸಹಕಾರದಿಂದ ಮತ್ತೇ ಯುದ್ಧ ನಡೆಸಿ ಗೋವೆಯ ಆಡಳಿತವನ್ನು ಕೈಗೆತ್ತಿಕೊಂಡನು. ಸ್ವಪ್ನ ಸಾರಸ್ವತ ಕಾದಂಬರಿಯಲ್ಲಿ ಅಲ್ಬುಕೇರ್ಕನಿಗೆ ಸಹಾಯಮಾಡಿದ ತಿಂಮೋಜನ ಬಗ್ಗೆ ವಿಚಾರ ಹೀಗೆ ಮೂಡಿಬಂದಿದೆ.

ನರಸಪ್ಪಯ್ಯನವರಿಗೆ ಮಗು ಹುಟ್ಟುವ ಕೆಲವು ದಿನಗಳ ಮೊದಲು ತಿಂಮೋಜನೆಂಬ ಒಬ್ಬ ವ್ಯಕ್ತಿ ತಾನು ವಿಜಯನಗರದ ರಾಜನಿಂದ ವಿಮುಕ್ತನಾದವನೆಂದು ಹೇಳಿಕೊಂಡು ಹುಡುಕಿ ಬಂದಿದ್ದ. ನರಸಪ್ಪಯ್ಯ ತಿಂಮೋಜನ ಹೆಸರು ಕೇಳಿಬಲ್ಲರು. ಬಿಜಾಪುರದ ಬಹಮನಿ ಸುಲ್ತಾನರ ಆಡಳಿತದ ಹುಳುಕುಗಳಲ್ಲದೇ ಅತಿವೃಷ್ಟಿ ಅನಾವೃಷ್ಟಿಗಳಿಂದ ಉಂಟಾದ ಅಸಂತುಷ್ಟಿಗಳಿಗೆ ತಿಂಮೋಜ ಮಾತು ಕೊಡುತ್ತಿದ್ದಾನೆಂದು ಅವರ ಕಿವಿಗೆ ಬಿದ್ದಿತ್ತು. ದಕ್ಷಿಣದ ಗೆರಸೊಪ್ಪ ರಾಜನಿಗೂ ಅವನಿಗೂ ಬಹಳ ಬಹಳವೆಂಬ ಸುದ್ಧಿಯನ್ನು ಅವರು ಕೇಳಿದ್ದರು. ಪುಲ್ಲಾ ನದಿಯಲ್ಲಿ ಮಚ್ಚೆಗಳನ್ನು ನಡೆಸಿಕೊಂಡು ಬರುತ್ತಿದ್ದ ವ್ಯಾಪಾರೀ ಅರಬರು ಅವನೊಬ್ಬ ಕಡಲುಗಳ್ಳನೆಂದೂ ತಮ್ಮ ಅನೇಕ ಮಚ್ಚೆಗಳನ್ನು ಅವನು ಲೂಟಿ ಮಾಡಿದ್ದಾನೆಂದು ಹೇಳುತ್ತಿದ್ದರು. [ಸ್ವಸಾ – ಪುಟ ೭]

ತಿಂಮೋಜ ಅಲ್ಬುಕೇರ್ಕನಿಗೆ ಮುಸಲ್ಮಾನರನ್ನು ಹೊಡೆದೋಡಿಸಲು ಸಹಾಯ ಮಾಡುವ ಸಲುವಾಗಿ ಕೆಲವು ದೃಢಕಾಯದ ಯುವಕರನ್ನು ತನ್ನೊಡನೆ ಕಳುಹಿಸಬೇಕಾಗಿ ಕೇಳಿಕೊಳ್ಳುತ್ತಾನೆ. ಮೊದಲಿಗೆ ಸಹಾಯ ಮಾಡಲು ನರಸಪ್ಪಯ್ಯ

ಒಪ್ಪಿಕೊಳ್ಳುತ್ತಾರೆ. ನಂತರ ಅಲ್ಬುಕೇರ್ಕನು ಗೋವೆಯನ್ನು ಗೆದ್ದ ತಕ್ಷಣ ಹೆಂಗಸರು ಮಕ್ಕಳೆನ್ನದೇ ಎಲ್ಲ ಮಹಮ್ಮದೀಯರ ಕಗ್ಗೊಲೆ ಮಾಡಿದ್ದು, ಹಳ್ಳಿಯಿಂದ ಸ್ಥಳೀಯ ಯುವತಿಯರನ್ನು ಅಪಹರಿಸಿದ್ದು, ಇಂತಹ ಕುಕೃತ್ಯಗಳಲ್ಲಿ ತಿಂವೋಜ ಶಾಮೀಲಾಗಿದ್ದನೆಂದು ಅಧಿಕೃತವಾಗಿ ತಿಳಿದುಬಂದಾಗ ನರಸಪ್ಪಯ್ಯ ಸಿಟ್ಟಿಗೆದ್ದು ಆತನನ್ನು ದೂರವಿಡುತ್ತಾರೆ.

ಅಲ್ಬುಕೇರ್ಕನು ಜಾಣತನದಿಂದ ಜಮೋರಿನ್ನನ ಮನವೊಲಿಸಿ ಕ್ಯಾಲಿಕಟ್, ಕ್ಯಾನಾನೋರನ್ನು ಸಹ ವಶಪಡಿಸಿಕೊಂಡನು. ಆತ ಮುಸ್ಲಿಂ ವಿರೋಧಿಯಾಗಿದ್ದನೇ ಹೊರತು ಹಿಂದುಗಳಿಗೆ ಯಾವ ತೊಂದರೆಯನ್ನು ಕೊಡಲಿಲ್ಲ. ಸರಕಾರದ ಸಣ್ಣ ಪುಟ್ಟ ಕೆಲಸಗಳನ್ನು ಸ್ಥಳೀಯರಿಗೆ ವಹಿಸಿಕೊಟ್ಟನಲ್ಲದೆ ಸತಿ ಪದ್ಧತಿಯನ್ನು ರದ್ದು ಪಡಿಸಿದನು.

ಅಲ್ಬುಕೇರ್ಕನ ಆಡಳಿತದ ಬಗ್ಗೆ 'ಸ್ವಪ್ನ ಸಾರಸ್ವತ'ದಲ್ಲಿ ಹೀಗೆ ಮೂಡಿಬಂದಿದೆ.

"ಒಂದು ಸಣ್ಣ ನೌಕಾಪಡೆಯ ಸಹಾಯದಿಂದ ಗೋವೆಯನ್ನು ಗೆದ್ದು ಪೋರ್ಚುಗಲ್ಲಿನ ಹಿರಿಮೆಯನ್ನು ಎತ್ತಿ ಹಿಡಿದ ಅಲ್ಬುಕೇರ್ಕ ತನ್ನ ವಸಾಹತಿನ ಎಲ್ಲವನ್ನೂ ಹತೋಟಿಗೆ ತಂದಿದ್ದ. ಬುದ್ಧಿವಂತನೂ ಹಿರಿಯ ಮುತ್ಸದ್ದಿಯೂ ಆಗಿದ್ದ ಅಲ್ಬುಕೇರ್ಕನಿಗೆ ರಾಜನೀತಿಯಿಂದ ಹಿಡಿದು ತೀಸ್‌ವಾಡಿಯ ಯಾವುದೇ ಗ್ರಾಮದಲ್ಲಿ ನಡೆಯುವ ಸಂತೆಯಲ್ಲಿ ಸಿಗುವ ಕೋಳಿಯ ಬೆಲೆ ಕೂಡಾ ಗೊತ್ತಿದೆಯೆಂದು ಜನರು ಮಾತಾಡಿಕೊಳ್ಳುತ್ತಿದ್ದರು. ಅವನು ಅಶಿಸ್ತಿನ ಜನರ ಗುಂಪನ್ನು ಶಿಸ್ತಿನ ಸೈನ್ಯವಾಗಿ ಮಾಡಿದ, ಹಾಗೆ ಮಾಡಿ ಪೋರ್ಚುಗಲ್ ವಸಾಹತು ಸಾಮ್ರಾಜ್ಯವನ್ನು ಕಟ್ಟುವ ತನ್ನ ಕನಸನ್ನು ನನಸಾಗಿಸಿದ. ಮಹಮ್ಮದೀಯರ ಬಗ್ಗೆ ಮೊದಲು ಇಷ್ಟೊಂದು ಕ್ರೂರವಾಗಿ ನಡೆದುಕೊಂಡ ವ್ಯಕ್ತಿ ಇಷ್ಟು ಒಳ್ಳೆಯ ಕೆಲಸಗಳನ್ನು ಮಾಡಲು ಸಾಧ್ಯವೇ ಎಂದು ನರಸಪ್ಪಯ್ಯ ತಮ್ಮಲೇ ಪ್ರಶ್ನಿಸಿ ಆಶ್ಚರ್ಯಚಕಿತರಾಗುತ್ತಿದ್ದರು" [ಸ್ವಸಾ. ಪುಟ ೧೧]

ಅಲ್ಬುಕೇರ್ಕನ ಆಡಳಿತದ ಕಾಲದಲ್ಲಿ ಸ್ಥಳೀಯರಿಗೆ ಹೆಚ್ಚಾಗಿ ತೊಂದರೆಯುಂಟಾಗಲಿಲ್ಲ. ಆದರೆ ಅವನ ನಂತರ ಬಂದ ಗೌರ್ನರ್‌ಗಳು, ಅಧಿಕಾರಿಗಳು ಆಡಳಿತದ ಬಗ್ಗೆ ಗಮನ ನೀಡದೆ ದಬ್ಬಾಳಿಕೆ ನಡೆಸಿ ಸಂಪತ್ತನ್ನು ಲೂಟಿ ಹೊಡೆಯುತ್ತಾ ಮಜಾ ಮಾಡಲಾರಂಭಿಸಿದರು. ಬರಬರುತ್ತಾ ಗೋವೆಯಲ್ಲಿ ಪೋರ್ಚುಗೀಸರ ಸಂಖ್ಯೆ ಹೆಚ್ಚುತ್ತಾ ಹೋದಂತೆ ಮೋಸ, ಹಿಂಸೆ, ಜೂಜು, ಸೂಳೆಗಾರಿಕೆ, ವಂಚನೆ ಅವರ ಸಾಮಾನ್ಯ ನಡತೆಯಾಗಿ ಬಿಟ್ಟವು. ಯುದ್ಧಗಳಲ್ಲಿ ಸೆರೆಸಿಕ್ಕ ಹಿಂದೂ ಮತ್ತು ಮುಸಲ್ಮಾನ ಹೆಣ್ಣುಮಕ್ಕಳ ಮತ ಪರಿವರ್ತನೆ ಮಾಡಿಸಿ ಪೋರ್ಚುಗೀಸರು ಮದುವೆಯಾಗಲಾರಂಭಿಸಿದರು. ಹೀಗೆ ಸೃಷ್ಟಿಯಾದ ಹೊಸ ಜನಾಂಗವನ್ನು ನೋವೀಸ್ ಎಂದು ಕರೆಯಲಾಯಿತು. ಇವರು ಸ್ಥಳೀಯರಂತೆ ಕೊಂಕಣಿ ಮಾತನಾಡುತ್ತಾ ವೀಳೆಯದೆಲೆ ಜಗಿಯುತ್ತಾ ಎಲ್ಲ ಪ್ರದೇಶಗಳಲ್ಲೂ ನೆಲೆಯೂರತೊಡಗಿದರು.

ಸ್ಥಳೀಯರನ್ನು ಗುಲಾಮರಂತೆ ದುಡಿಸಿಕೊಳ್ಳುತ್ತಾ ಐಷಾರಾಮಿ ಜೀವನ ನಡೆಸುತ್ತಾ ನಾನಾ ರೀತಿಯಲ್ಲಿ ಕಿರುಕುಳ ಕೊಡಲಾರಂಭಿಸಿದರು.

"ಅಲ್ಬುಕೇರ್ಕನ ನಂತರದ ವೈಸರಾಯ್ ಸಪ್ಪೆ ಮನುಷ್ಯನಾಗಿದ್ದ. ಅಲ್ಬುಕೇರ್ಕನ ವಿಚಾರಪರತೆಯಾಗಲೀ ಮುತ್ಸದ್ದಿತನವಾಗಲೀ ಅವನಿಗಿರಲಿಲ್ಲ. ಅವನ ನಂತರದವ ಕೈ ತುಂಬಾ ದುಡ್ಡು ಮಾಡಿ ಪೋರ್ಚುಗಲ್ಲಿಗೆ ಹಿಂತಿರುಗಿದ. ಅವನ ನಂತರದವ ಶುದ್ಧ ಕಳ್ಳ ಮತ್ತು ಸ್ವೇಚ್ಛಾಚಾರಿಯಾಗಿದ್ದ. ಒಟ್ಟಿನಲ್ಲಿ ಆಡಳಿತ ಕೆಟ್ಟುಹೋಯಿತು. ಐದಾರು ವರ್ಷಗಳಲ್ಲಿ ತೀನ್‌ವಾಡಿಯ ತುಂಬ ಪೋರ್ಚುಗೀಸರು ತುಂಬಿದರು, ತುಂಬಿದ್ದಷ್ಟೇ ಅಲ್ಲ, ಕೆಟ್ಟು ಗೊಬ್ಬರವಾದರು. ಅನೀತಿಗಳು ತಾಂಡವವಾಡಿದುವು ವರ್ತಕರು ಹಾಗೂ ನೌಕರರಲ್ಲಿ ಅನಾಚಾರಗಳು ತುಂಬಿಬಿಟ್ಟವು. ಇಂಡಿಯಾಕ್ಕೆ ಸುಖ ಅರಸಿಕೊಂಡು ಬಂದ ಪ್ರತಿಯೊಬ್ಬ ಪೋರ್ಚುಗೀಸನೂ ತನ್ನನ್ನು ತಾನು 'ದಾವ್' ಎಂದು ಕರೆದುಕೊಳ್ಳತೊಡಗಿದ. ಆ ಬಿರುದು ಪೋರ್ಚುಗಲ್ಲಿನಿಂದ ಬಂದ ಮೊಟ್ಟಮೊದಲ ಹಡಗಿನ ಅಧಿಕಾರಿಯೂ ಆಮೇಲಿನ ಗವರ್ನರನೂ ಆದ ವಾಸ್ಕೋ ದ ಗಾಮನಿಗೆ ಪೋರ್ಚುಗೀಸ ರಾಜನಾದ ದಾಮ್ ಮನ್ವೇಲನು ಕೊಟ್ಟ ಹೆಸರು. ಈಗ ಗೋವೆಯಲ್ಲಿ ಬಡಗಿಯಿಂದ ಹಿಡಿದು ಪ್ರತಿಯೊಬ್ಬ ಪೋರ್ಚುಗೀಸನೂ ತನ್ನನ್ನು ತಾನು 'ದಾಮ್' ಎಂದು ಕರೆದುಕೊಳ್ಳತೊಡಗಿದ. ಅವರಲ್ಲಿ ತುಸು ಅನುಕೂಲಸ್ಥರು ದೊಡ್ಡ ದೊಡ್ಡ ಮನೆಗಳನ್ನು ಬಾಡಿಗೆಗೆ ಪಡೆದು ಆಮದು ಮಾಡಿಕೊಂಡು ಹೆಂಡಂದಿರೊಡನೆ ಐಷಾರಾಮದ ಬದುಕು ನಡೆಸತೊಡಗಿದರು. ಸಾಮಾನ್ಯರು ಸಣ್ಣ ಸಣ್ಣ ಮನೆಗಳಲ್ಲಿ ಇದ್ದು ಸುಖ ಲೋಲುಪರಾದರು.

ಪೋರ್ಚುಗೀಸರ ನಾಡಿನಲ್ಲಿ ಜನರ ಸಂಖ್ಯೆ ಕಮ್ಮಿ. ಹಾಗಾಗಿ ವಸಾಹತುಗಳಲ್ಲೂ ಅದರ ಸಂಖ್ಯೆ ಕಮ್ಮಿಯೇ ಎಂದು ಅಲ್ಬುಕೇರ್ಕನು ಮಾಡಿದ ಸ್ಥಳೀಯ ಜನರೊಡನೆಯ ಸಂಪರ್ಕ ಈಗ ಬೃಹತ್ತಾಗಿ ಬೆಳೆಯಿತು. ನೋವೀಸ್ ಎಂದು ಕರೆಯಲ್ಪಡುತ್ತಿದ್ದ ಈ ಮಂದಿ ಸಂಜೆಯಾಗುತ್ತಾ ಬಂದಂತೆ ಊರಲ್ಲಿ ಕುದುರೆಗಾಡಿಗಳಲ್ಲಿ ಸವಾರಿ ಮಾಡುತ್ತಾ ಹೋಗುತ್ತಿದ್ದರು, ಝಣ ಝಣ ಎಂದು ಶಬ್ಧ ಮಾಡುವ ಆ ಗಾಡಿಗಳ ಹಿಂದೆ ಗುಲಾಮರು ಕೊಡೆಗಳನ್ನೂ ಚಿತ್ತಾಲಂಕಾರದ ಆಯುಧಗಳನ್ನು ಹಿಡಿದುಕೊಂಡು ಓಡಬೇಕಿತ್ತು. ಈ ಸೊಗಸುಗಳಿಂದ ಅವರು ರಾಜರಂತೆ ಮೆರೆಯುತ್ತಿದ್ದರು. ರಾಜರಂತಿದ್ದುದರಿಂದ ಅವರಿಗೆ ಗುಲಾಮರೂ ಬೇಕು, ಗುಲಾಮರನ್ನು ಕೊಳ್ಳುವುದು, ಮಾರುವುದು, ಕೊಲ್ಲುವುದು ಎಲ್ಲಾ ನಡೆಯತೊಡಗಿದುವು. ಊರ ಮಧ್ಯದ ಚೌಕಗಳಲ್ಲಿ ಗಂಡಸರನ್ನು ಹೆಂಗಸರನ್ನು ಬೆತ್ತಲೆ ನಿಲ್ಲಿಸಿ ಹ್ಹಹ್ಹಹ್ಹ ಎಂದು ಜೋರಾಗಿ ನಗುತ್ತಾ ರಾಜಾರೋಷದಿಂದ ಹರಾಜು ಹಾಕುವುದು ನಿತ್ಯದ ಮಾತು. ಕನ್ಯೆಯರ ಕನ್ಯತ್ವದ ಪರೀಕ್ಷೆ ನಡೆದ ಮೇಲೆ ಅವರನ್ನು ಕೊಳ್ಳುವುದು. ಹೀಗಾಗಿ ಒಬ್ಬೊಬ್ಬ ಪೋರ್ಚುಗೀಸನ ಬಳಿಯೂ ಐದಾರು ಇಟ್ಟುಕೊಂಡ ಹೆಂಗಸರು ಸಾಕಷ್ಟು ಸೋಮಾರಿತನ [ಸ್ವಸಾ. ಪುಟ ೧೨]

ಹೀಗೆ ಐಷಾರಾಮಿ ಜೀವನ ನಡೆಸುವುದರ ಜೊತೆಗೆ ಹಿಂದೂಗಳನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುವಂತೆ ಹಲವಾರು ರೀತಿಗಳಲ್ಲಿ ಹಿಂಸಿಸಲಾರಂಭಿಸಿದಾಗ ಸ್ಥಳೀಯರು ಭಯಭೀತರಾದರು. ಕಂಡ ಕಂಡಲ್ಲಿ ಹಾದಿ ಬೀದಿಗಳಲ್ಲಿ ಪೋರ್ಚುಗೀಸರು ತಮ್ಮ ಧರ್ಮವೇ ಶ್ರೇಷ್ಠ ಇತರ ಎಲ್ಲಾ ಧರ್ಮದವರೂ ತಮ್ಮ ಧರ್ಮವನ್ನೇ ಪಾಲಿಸಬೇಕೆಂದು ಕಿರುಚಾಡುತ್ತಿದ್ದರು.

"ಒಂದು ಬಾರಿ ನರಸಪ್ಪಯ್ಯ ಗೋವೆಯ ರಸ್ತೆಯಲ್ಲಿ ಹೋಗುತ್ತಿದ್ದಾಗ ನಾಲ್ಕಾರು ಮಂದಿ ಪೋರ್ಚುಗೀಸರು ಶರಾಬು ಕುಡಿದು ತೂರಾಡುತ್ತಾ 'ನಿಮ್ಮ ದೇವರ ಮೂರ್ತಿಗಳನ್ನು ಸಮುದ್ರಕ್ಕೆಸೆಯಿರಿ. ನೀವು ಪೂಜಿಸುವ ಅವುಗಳಿಗೆ ಜೀವವಿಲ್ಲ, ಯೇಸುವೇ ಸರ್ವಶಕ್ತನು, ಅವನನ್ನು ಆರಾಧಿಸೋಣ' ಎಂದು ಕೂಗಾಡುತ್ತಿರುವುದನ್ನು ಕೇಳಿದರು. ಸುತ್ತ ದೊಡ್ಡದೊಂದು ಗುಂಪು. ಸ್ಥಳೀಯರಲ್ಲಿ ಕೆಲವರು ಅದನ್ನು ಪ್ರತಿಭಟಿಸಿದಾಗ ಆ ಪೋರ್ಚುಗೀಸ ಕಠಾರಿಯೆತ್ತಿ ತಿವಿದೇ ಬಿಟ್ಟ. ಜಿಲ್ಲೆಂದು ರಕ್ತ ಹರಿಯಿತು, ತೀಸ್‌ವಾಡಿಯಲ್ಲಿ ಅಲ್ಲಲ್ಲಿ ದೇವಸ್ಥಾನಗಳನ್ನು ಕೆಡವಿ ಚರ್ಚುಗಳನ್ನು ಕಟ್ಟಿದ್ದಾರೆಂದೂ ಬಲವಂತದಿಂದ ಸ್ಥಳೀಯರನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತಿದ್ದಾರೆಂದೂ ನರಸಪ್ಪಯ್ಯ ಕೇಳಿದ್ದರು" [ಸ್ವಸಾ. ಪುಟ ೧೪]

ಹಿಂದೂಗಳು ಆಚರಿಸುವ ನಾಮಕರಣ, ಮುಂಜಿ, ಮದುವೆ ಸಮಾರಂಭಗಳನ್ನಲ್ಲದೆ ಶವ ಸಂಸ್ಕಾರವನ್ನು ನಡೆಸದಂತೆ ತಡೆಗಟ್ಟುತ್ತಾ ಪೋರ್ಚುಗೀಸ ಅಧಿಕಾರಿಗಳು ಹಿಂಸಿಸಲಾರಂಭಿಸಿದಾಗ ಸಾರಸ್ವತರು ತಮ್ಮ ಜೀವಗಳನ್ನು, ಧರ್ಮವನ್ನು ರಕ್ಷಿಸಿಕೊಳ್ಳಲು ವಲಸೆ ಹೋಗಲು ಪ್ರಾರಂಭಿಸಿದರು. ಮತಾಂತರವಾದವರೂ ಸಹ *ಇನ್‌ಕ್ವಿಸಿಷನ್ ಶಿಕ್ಷೆಗೆ ಹೆದರಿ ಊರು ಬಿಟ್ಟು ಹೋಗಲಾರಂಭಿಸಿದರು.

ಬ್ರಿಟಿಷರು ಭಾರತವನ್ನು ತಮ್ಮ ಅಧೀನಪಡಿಸಿಕೊಂಡಾಗಲೂ ಪೋರ್ಚುಗೀಸರು ಗೋವೆಯನ್ನು ಬಿಟ್ಟುಕೊಡಲಿಲ್ಲ. ೧೬೬೧ರಲ್ಲಿ ಪೋರ್ಚುಗಲ್ಲಿನ ರಾಜಕುಮಾರಿ ಕ್ಯಾಥಲಿನ್ ಆಫ್ ಬ್ರಿಗಾಂಜಾಳನ್ನು ಇಂಗ್ಲೆಂಡಿನ ದೊರೆ ಎರಡನೇಯ ಚಾರ್ಲ್ಸ್‌ನಿಗೆ ಕೊಟ್ಟು ಮದುವೆ ಮಾಡಿಸಿ ಬಾಂಬೆನಗರವನ್ನು ಆತನಿಗೆ ವರದಕ್ಷಿಣೆಯಾಗಿ ಬಿಟ್ಟುಕೊಡುವುದರ ಮೂಲಕ ಬ್ರಿಟಿಷರು ತಮ್ಮ ತಂಟೆಗೆ ಬರದಂತೆ ನೋಡಿಕೊಂಡರು.

೧೮೪೩ರಲ್ಲಿ ಪಣಜಿಂಯನ್ನು ರಾಜಧಾನಿಯಾಗಿ ಮಾಡಿಕೊಂಡು ವ್ಹೆಲಾ ಗೋವಾದಿಂದ ನೋವಾ–ಗೋವಾವನ್ನು ವಿಸ್ತರಿಸಿದರು. Transporters Aereos da India Portuguesa ಎಂಬ ವಿಮಾನ ನಿಲ್ದಾಣವನ್ನು ನಿರ್ಮಿಸಿ ಭಾರತ ಮತ್ತು ಪೋರ್ಚುಗಲ್ಲಿನ ಮಧ್ಯೆ ಸಂಪರ್ಕವನ್ನೇರ್ಪಡಿಸಿದರು, ಹೀಗೆ ಗೋವಾ ಪ್ರಾಂತ್ಯದ ಆಡಳಿತವನ್ನು ಸಂಪೂರ್ಣವಾಗಿ ಹಿಡಿತಕ್ಕೆ ತೆಗೆದುಕೊಂಡ ಪೋರ್ಚುಗೀಸರು ಸ್ಥಳೀಯರ ಮೇಲೆ ದಬ್ಬಾಳಿಕೆ ನಡೆಸಿದರು.

---

* ಕ್ರೈಸ್ತ ಧರ್ಮದ ಪಾಲನೆಗೆ ಚ್ಯುತಿ ತಂದವರಿಗೆ ನೀಡುತ್ತಿದ್ದ ಘೋರ ಶಿಕ್ಷೆ. ಈ ಶಿಕ್ಷೆಗೆ ಮತಾಂತರವಾದವರು ಮಾತ್ರವಲ್ಲದೆ ಕ್ರೈಸ್ತಧರ್ಮದ ಪಾಲನೆಯಲ್ಲಿ ತಪ್ಪಿದ ಕ್ರಿಶ್ಚಿಯನ್ನರು ಸಹ ಒಳಗಾಗುತ್ತಿದ್ದರು.

**ಈ. ಗೋವೆಯ ಸ್ವಾತಂತ್ರ್ಯ**

ಗೋವೆಯ ಆಡಳಿತವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡು ಪಟ್ಟಭದ್ರನಂತೆ ಕುಳಿತ ಪೋರ್ಚುಗೀಸರನ್ನು ಹೊಡೆದೋಡಿಸಲು ಮರಾಠರು ಸಜ್ಜಾದರು. ೧೬೮೩ರಲ್ಲಿ ಗೋವೆಯ ಕೆಲವು ಪ್ರಾಂತ್ಯಗಳಲ್ಲಿ ದಾಳಿ ನಡೆಸಲಾರಂಭಿಸಿದ ಮರಾಠರು ೧೭೪೧ರಲ್ಲಿ ವಶಪಡಿಸಿಕೊಂಡರು. ಪೋರ್ಚುಗಲ್ಲಿನಲ್ಲೂ ಸಹ ಬ್ರಿಟನ್ನಿನ ವಿರುದ್ಧ ಹೋರಾಟ ನಡೆಸಲು ಮುಂದಾಗಿ ಸೋತುಹೋದ ಪೋರ್ಚುಗಲ್ಲಿನ ಆರ್ಭಟ ಕ್ಷೀಣಿಸಲಾರಂಭಿಸಿದರು. ಗೋವೆಯಲ್ಲಿ ಮತಾಂತರಗೊಂಡಿದ್ದ ಜನರು ಇನ್‌ಕ್ವಿಸಿಷನ್‌ನ ಭಯವಿಲ್ಲದೆ ಮತ್ತೇ ತಮ್ಮ ಧರ್ಮವನ್ನು ಪಾಲಿಸಲಾರಂಭಿಸಿದರು.

೧೯೪೭ರ ಆಗಸ್ಟ್ ಹದಿನೈದರಂದು ಭಾರತಕ್ಕೆ ಸ್ವಾತಂತ್ರ್ಯ ದೊರಕಿದರೂ ಗೋವೆ ಸ್ವತಂತ್ರವಾಗಲಿಲ್ಲ. ದಿ ಯುನೈಟಡ್ ಫ್ರಂಟ್ ಆಫ್ ಗೋವನ್ಸ್, ದಾದರ್-ನಾಗರ್-ಹವೇಲಿ ಆಜಾದ್ ಗೋಮಂತಕ್‌ದಲ್ ಮೊದಲಾದ ಸಂಘಟನೆಗಳು ಗೋವೆಯ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದುವು. ಅಂದಿನ ಪ್ರಧಾನಮಂತ್ರಿ ಜವಾಹರ್‌ಲಾಲ್ ನೆಹರೂರವರು ಶಾಂತಿ ಸಂಧಾನಕ್ಕೆ ಮುಂದಾದರೂ ಪೋರ್ಚುಗಲ್ ಜಗ್ಗದೆ ಇದು ಅಂತರಾಷ್ಟ್ರೀಯ ಮಟ್ಟದ ಗಹನ ಚರ್ಚೆಯ ವಿಷಯವಾಯಿತು. ಕೊನೆಗೆ ಮಿಲಿಟರಿಯ ಸಹಾಯದಿಂದ ಪೋರ್ಚುಗಲ್ಲನ್ನು ಸದೆ ಬಡಿಯಬೇಕಾಯಿತು. ಭಾರತದ ಆಕ್ರಮಣದಿಂದ ಹಿಂಜರಿದ ವೈಸರಾಯ್ ವಾಸಾಲೋ ದ ಸಿಲ್ವಾ ಗೋವೆಯನ್ನು ಬಿಟ್ಟುಕೊಡಲು ಮುಂದಾದನು. ೧೯೬೧ರ ಡಿಸೆಂಬರ್ ೧೯ನೇ ದಿನಾಂಕದಂದು ಗೋವೆಗೆ ಸ್ವಾತಂತ್ರ್ಯ ದೊರಕಿತು. ಆಗ ಕೇಂದ್ರಾಡಳಿತದ ಸರಕಾರ ಪಡೆದ ಗೋವಾ ೧೯೮೭ರಲ್ಲಿ ರಾಜ್ಯ ಸರಕಾರದ ಆಡಳಿತ ಪಡೆಯಿತು.

## ಅಧ್ಯಾಯ – ೪

# ಸಾರಸ್ವತ ಸಮುದಾಯದ ಸಂಸ್ಕೃತಿಯ ಸ್ವರೂಪ

'ಸಂಸ್ಕೃತಿ' ಎಂಬ ಪದದ ವ್ಯಾಪ್ತಿ ಬಹಳ ದೊಡ್ಡದು, ಅದಕ್ಕೆ ಸಂಬಂಧಪಟ್ಟಂತೆ ಅನೇಕ ವ್ಯಾಖ್ಯೆಗಳಿವೆ. ಅದರೆ ಸರಳವಾಗಿ ಹೇಳಬೇಕೆಂದರೆ 'ಸಂಸ್ಕೃತಿ' ಎಂದರೆ ಜೀವನ ವಿಧಾನ. ಈ ಜೀವನ ವಿಧಾನವು ಜನಸಮುದಾಯದ ಜೀವನ ವಿಧಾನವಾಗಿರುತ್ತದೆ. ಅಂದರೆ, ನಿಜವಾದ ಸಂಸ್ಕೃತಿ ಜನಸಮುದಾಯವನ್ನು ಪ್ರತಿನಿಧಿಸುತ್ತದೆ ಎಂತಾಯಿತು ಜನ ಸಮುದಾಯದ ಜೀವನಕ್ಕೆ ಪೂರಕವಾಗಿರುವ ಸಾಹಿತ್ಯ, ಕಲೆ, ಸಂಗೀತ, ನೃತ್ಯ ಮುಂತಾದುವುಗಳು ಸಂಸ್ಕೃತಿಯ ಅವಯವಗಳಾಗಿರುತ್ತದೆ.

* 'ಜೀವನದ ಭಾರವನ್ನು ಹಗುರಮಾಡುವ ಯೋಗವೇ ಸಂಸ್ಕೃತಿ; ಅದೇ ಆತ್ಮ ಸಂಸ್ಕಾರ' – ಎಮರ್ಸನ್

'ಎಲ್ಲ ಸದ್ಗುಣ ಸಂಪತ್ತಿನ ಸಾಮರಸ್ಯವೇ ಸಂಸ್ಕೃತಿ' – ಮ್ಯಾಥ್ಯೂ ಅರ್ನಾಲ್ಡ್

'ಒಂದು ನಿರ್ದಿಷ್ಟ ಸಮಾಜದ ಸದಸ್ಯರು ಹಂಚಿಕೊಳ್ಳುವ ಹಾಗೂ ಪ್ರಸಾರ ಮಾಡುವ ಜ್ಞಾನ, ದೃಷ್ಟಿಕೋನ ಮತ್ತು ಸ್ವಾಭಾವಿಕ ನಡವಳಿಕೆಯ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿ' – ಲಿಂಟನ್

'ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯನು ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ, ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ' – ಟೈಲರ್

'ನಾವು ಕಲಿತ ಹಾಗೂ ಪ್ರಸಾರ ಮಾಡುವ ಸ್ವಭಾವ, ತಂತ್ರವಿಧಾನ, ಚಿಂತನೆ ಮತ್ತು ಮೌಲ್ಯಗಳ ಮೊತ್ತವಾಗಿದೆ. ಸಂಸ್ಕೃತಿಯು ವಂಶಪಾರಂಪರ್ಯದಿಂದ ಬರುವುದಿಲ್ಲ; ಮನುಷ್ಯನ ಕಲಿಕೆಯಿಂದ ರೂಪುಗೊಳ್ಳುತ್ತದೆ' – ಕ್ರೋಬರ್

'ಪೂರ್ಣ ಪರಿಸರದಲ್ಲಿ ಮನುಷ್ಯ ನಿರ್ಮಿತ ಭಾಗವೇ ಸಂಸ್ಕೃತಿ' – ಹರ್ಸ್‌ಕೊವಿಟ್ಸ್

---

* ಹಿ.ಚಿ. ಬೋರಲಿಂಗಯ್ಯ – ಸಿದ್ಧಿಯರ ಸಂಸ್ಕೃತಿ ೧೯೯೩ [ಪುಟ ೨೫, ೨೭, ೨೮]

*1 "ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಳ್ಳುವ ವಿಧಾನವೇ ಸಂಸ್ಕೃತಿ. ಲೋಕದೊಡನೆ ನಮಗಾಗುವ ನಾನಾ ಸಂಪರ್ಕಗಳಲ್ಲಿ ನಾವು ಸಂಪಾದಿಸುವ ಔಚಿತ್ಯವೇ ಸಂಸ್ಕೃತಿ".

"ಪಾಂಡಿತ್ಯಕ್ಕೂ ಸಂಸ್ಕೃತಿಗೂ ವಿರೋಧವೇನೂ ಇಲ್ಲ ಬುದ್ಧಿಕುಶಲತೆಗೂ ಸಂಸ್ಕೃತಿಗೂ ವೈಷಮ್ಯವೇನೂ ಇಲ್ಲ. ಸಂಸ್ಕೃತಿಯಲ್ಲಿ ವಿದ್ವತ್ತಿಗೂ ಪ್ರತಿಭೆಗೂ ಚತುರತೆಗೂ ಜಾಗವುಂಟು, ಆದರೆ ಅದಿಷ್ಟರಿಂದಲೇ ಸಂಸ್ಕೃತಿಯಾಗದು. ಸಂಸ್ಕೃತಿಯೆಂದರೆ ಒಂದು ಅಂತರಂಗದ ಪರಿಪಾಕ".

"ನಿಜವಾದ ಸಂಸ್ಕೃತಿ ಭೌತಸಂಪತ್ತಿನ ಪ್ರಗತಿಗಿಂತ ಆತ್ಮ ಸಂಪತ್ತಿನ ಪ್ರಗತಿ ಹೆಚ್ಚಾದದ್ದು ...... ಅದರ ಮುಖ್ಯಲಕ್ಷ್ಯ ಸಮಾಜವಲ್ಲ, ವ್ಯಕ್ತಿ" – ಡಿ.ವಿ.ಜಿ.

*2 "ಸಂಸ್ಕೃತಿ"ಯೆಂಬುದು ಒಂದು ಹಳೆಯ ಪದಾರ್ಥದ ಹೊಸ ಹೆಸರು. ಬಾಳ್ವೆಯನ್ನು ಹದಪಡಿಸುವುದು ಎಂದು ಅದರ ಅರ್ಥ. ನಾವು ಎಂಥ ನಯ–ವಿನಯಗಳಿಂದ ಎಂಥ ನಯ ನಾಜೂಕುಗಳಿಂದ ಬಾಳ್ವೆಯನ್ನು ನಡೆಸಿದರೆ ಅದರಲ್ಲಿ ಹುಳಿಕಹಿಗಳು ಕಡಿಮೆಯಾಗಿ ಸ್ವಾರಸ್ಯ ಹೆಚ್ಚೀತೋ ಆ ತೆರದ ಮನೋಭಾವವನ್ನು, ನಡತೆ–ನುಡಿತೆಗಳನ್ನೂ ಸಂಪಾದಿಸಿಕೊಳ್ಳುವುದು ಸಂಸ್ಕೃತಿ. ಅದು ಒಂದು ಬಗೆಯ ಆತ್ಮಶಿಕ್ಷಣ' – ಬಿ.ಎಂ.ಶ್ರೀ.

ಭಾರತದಲ್ಲಿ 'ಸಂಸ್ಕೃತಿ' ಎಂದಾಕ್ಷಣ ಅನೇಕ ಜೀವನ ವಿಧಾನಗಳು ಎದುರಾಗುತ್ತವೆ. ಸಾಂಪ್ರದಾಯಿಕ ಸಂಸ್ಕೃತಿ – ಆಧುನಿಕ ಸಂಸ್ಕೃತಿ, ದಲಿತ ಸಂಸ್ಕೃತಿ – ವೈದಿಕ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ – ನಾಗರಿಕ ಸಂಸ್ಕೃತಿ – ಹೀಗೆ ಹಲವಾರು ವಿಂಗಡಣೆಗಳು ಕಂಡುಬರುತ್ತವೆ. ಇಂತಹ ಎಲ್ಲಾ ವಿಷಯಗಳನ್ನು ಪರಿಗಣಿಸಿ ಹೇಳಬೇಕೆಂದರೆ ಸಂಸ್ಕೃತಿ ಎಂಬುದು ಕಾಲ, ದೇಶ, ಜನ ಸಮುದಾಯಗಳನ್ನವಲಂಭಿಸಿದೆ. ಆಯಾ ಕಾಲ, ದೇಶ, ಜನಾಂಗಗಳ ಜೀವನ ವಿಧಾನದಲ್ಲಿ ನಿರಂತರ ಬೆಳವಣಿಗೆ ನಡೆದಿರುತ್ತದೆ. ಧರ್ಮ, ಸಾಹಿತ್ಯ, ಕಲೆ, ಸಂಗೀತ, ಆಚರಣೆ, ಹಬ್ಬ, ಮದುವೆ, ಸಂಪ್ರದಾಯ ಇವೆಲ್ಲಾ ಸಂಸ್ಕೃತಿಯೊಂದರ ಒಳಗೆ ನಡೆಯುವ ವಿವಿಧ ಕ್ರಿಯೆಯಾಗಿ ಕಾಣುತ್ತವೆ. ಹೀಗಾಗಿ ಸಂಸ್ಕೃತಿಯೆಂಬುದು ಎಲ್ಲಾ ವಿಷಯಗಳನ್ನೊಳಗೊಂಡ ಆಯಾ ಕಾಲಘಟ್ಟದ ಸಮುದಾಯ ಬದುಕಿನ ಪ್ರತಿನಿಧಿಯಾಗಿ ಕಾಣುತ್ತದೆ. ಹಾಗೆಯೇ ಸ್ಥೂಲವಾಗಿ ಸಂಸ್ಕೃತಿಯನ್ನು ಶಿಷ್ಟ ಸಂಸ್ಕೃತಿ ಹಾಗೂ ಜನಪದ ಸಂಸ್ಕೃತಿಯೆಂದು ವಿಭಜನೆ ಮಾಡಲಾಗಿದೆ 'ಸ್ವಪ್ನ ಸಾರಸ್ವತ'ದಲ್ಲಿ ಜನಪರವಾದ ಜನಪದ ಸಂಸ್ಕೃತಿ ಕಂಡುಬರುತ್ತದೆ.

ಸಾರಸ್ವತದ ಸಮುದಾಯದ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡಬೇಕಾದರೆ ಮೊದಲಿಗೆ ಆ ಸಮುದಾಯದ ಕೆಲವು ವಿವರಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಸಾರಸ್ವತರಲ್ಲಿ ಸುಮಾರು ನಲವತ್ತು ಪ್ರಭೇದಗಳಿವೆ ಎನ್ನಲಾಗಿದೆ. ಮುಖ್ಯವಾಗಿ ಗೌಡ

---

*1 ಡಿ.ವಿ.ಜಿ. – ಸಂಸ್ಕೃತಿ ೧೯೫೬

*2 ಮೈಸೂರಿನ ಆಕಾಶವಾಣಿಯಿಂದ ಪ್ರಸಾರ ಮಾಡಿದ ಭಾಷಣ [೭-೧-೧೯೫೫] ಡಿ.ವಿ.ಜಿ. ಸಂಸ್ಕೃತಿ – ೧೯೫೬

ಸಾರಸ್ವತ, ಸಾರಸ್ವತ ಬ್ರಾಹ್ಮಣ, ರಾಜಾಪುರ ಸಾರಸ್ವತ, ದೈವಜ್ಞ ಸಾರಸ್ವತ ಮುಂತಾದುವುಗಳು. ಆಯಾ ಪಂಗಡ ನೆಲೆನಿಂತ ಪ್ರದೇಶ ಹಾಗೂ ನಂಬಿಕೊಂಡ ಧರ್ಮದ ಮೇಲೆ ಈ ಪ್ರಭೇದಗಳು ಉಂಟಾಗಿರುತ್ತವೆ. ಉದಾಹರಣೆಗೆ ಉತ್ತರ ಭಾರತದ ರಾಜಾಪುರ ತಾಲ್ಲೂಕಿನ ರತ್ನಗಿರಿ ಜಿಲ್ಲೆಯಲ್ಲಿ ನೆಲೆನಿಂತವರು ರಾಜಾಪುರಿ ಸಾರಸ್ವತರೆಂದು ಕರೆಯಿಸಿಕೊಂಡರು. ಹಾಗೆಯೇ ಅವರ ಮನೆತನದ ಹೆಸರುಗಳು ಸಹ ಆಯಾಸ್ಥಳಕ್ಕೆ ತಕ್ಕನಾಗಿ ಹುಟ್ಟಿಕೊಂಡವು. ಉದಾಹರಣೆಗೆ ಸಾಸಷ್ಟಿಯಲ್ಲಿ ನೆಲೆಸಿದವರು ಸಾಸಷ್ಟಿಕರ್ ಆದರು. ಕುಶಸ್ಥಾಲಿಯ ಸಾರಸ್ವತರು ಕುಶಸ್ಥಾಲಿಕರ್ ಆದರು ಇತ್ಯಾದಿ.

## ಸಾರಸ್ವತರ ಮೂಲ

ಪೌರಾಣಿಕ ಕಥೆಯೊಂದರ ಪ್ರಕಾರ ಪರಶುರಾಮನು ಸಾರಸ್ವತರನ್ನು ಗೋವೆಗೆ ಕರೆದುತಂದು ಬಿಟ್ಟನು ಎನ್ನಲಾಗಿದೆ. ಪರಶುರಾಮನು ಪಶ್ಚಿಮಘಟ್ಟದ ಕೊಂಕಣ ಪ್ರದೇಶದಲ್ಲಿ ನಿಂತು ಬಾಣವನ್ನು ಬಿಡಲಾಗಿ, ಅದು ಬೆನೋಲಿಮ್ ಎಂಬ ಜಾಗದಲ್ಲಿ ಹೋಗಿ ಬಿತ್ತಂತೆ, ಈ ಬೆನೋಲಿಮ್ [ಬಾನಾವಲಿ] ಎಂಬ ಸ್ಥಳವು ಪಣಜಿಯಿಂದ ನಲವತ್ತು ಕಿಲೋಮೀಟರ್ ದೂರದಲ್ಲಿದ್ದು ಈಗ ಬೀಚ್ ರಿಸಾರ್ಟ್ ಆಗಿರುವ ಪ್ರವಾಸ ತಾಣವಾಗಿದೆ. ಈ ಕಥೆಗೆ ಆಧಾರವೋ ಎಂಬಂತೆ ದಕ್ಷಿಣ ಗೋವೆಯ ಬೆನೋಲಿಮ್‌ನಗರದ ಪೆನ್‌ಗ್ವಿನಿಮ್ ಎಂಬ ಹಳ್ಳಿಯಲ್ಲಿ ಅಪರೂಪದ ಪರಶುರಾಮನ ದೇವಾಲಯವಿದೆ. ವೇದಗಳಲ್ಲಿ, ರಾಮಾಯಣ, ಮಹಾಭಾರತ, ಭಾಗವತ ಹಾಗೂ ಭವಿಷ್ಯೋತ್ತರ ಪುರಾಣಗಳಲ್ಲಿಯೂ ಸಹ ಸಾರಸ್ವತ ಬ್ರಾಹ್ಮಣ ಜನಾಂಗದ ಬಗ್ಗೆ ಉಲ್ಲೇಖಗಳಿವೆ.

* ಮಹಾಭಾರತದಲ್ಲಿ ಭೀಷ್ಮ ಬಾಣಗಳ ಮಂಚದ ಮೇಲೆ ಮಲಗಿರುವಾಗ ಅರ್ಜುನನಿಗೆ ಕುಡಿಯಲು ನೀರು ಕೇಳುತ್ತಾರೆ. ಆಗ ಅರ್ಜುನನು ಭೂಮಿಯ ಒಂದು ನಿರ್ದಿಷ್ಟ ಜಾಗಕ್ಕೆ ಬಾಣವನ್ನು ಬಿಟ್ಟಾಗ ಅಲ್ಲಿಂದ ನೀರು ಚಿಮ್ಮಿ ಭೀಷ್ಮರ ದಾಹವನ್ನು ನೀಗಿಸುತ್ತದೆ. ಭೂಮಿಯ ಒಳಗೆ ಹರಿಯುವ ಅಂತರ್ಜಲದ ಸೆಲೆಯನ್ನು ಕಂಡುಹಿಡಿಯುವ ತಂತ್ರಜ್ಞಾನವನ್ನು ಒಬ್ಬ ಋಷಿಮುನಿಯು ಅರ್ಜುನನಿಗೆ ಹೇಳಿಕೊಟ್ಟಿರುತ್ತಾನೆ. ಭೀಷ್ಮರ ದಾಹವನ್ನು ತಣಿಸಿದ ನೀರಿನ ಬುಗ್ಗೆ ಸರಸ್ವತಿ ನದಿಯ ನೀರಾಗಿದ್ದು, ಆ ನದಿಯ ನೀರನ್ನು ಹೊರತರಲು ನೆರವಾದ ಋಷಿಮುನಿಯೇ ಸಾರಸ್ವತ ಮುನಿಯೆಂದು ಕರೆಯಲ್ಪಡುತ್ತಾನೆ. ಈತನೇ ಸಾರಸ್ವತ ಬ್ರಾಹ್ಮಣರ ಮೂಲ ಧರ್ಮಗುರುವಾಗುತ್ತಾನೆ. ಹೀಗೆ ಸಾರಸ್ವತ ಮುನಿಯ ಉಲ್ಲೇಖ ಬೃಹದ್ ಸಂಹಿತ– ಅಧ್ಯಾಯ ೩೦ – ೫೭ರಲ್ಲಿ ಕಂಡು ಬರುತ್ತದೆ.

ಹಾಗೆಯೇ ಮಹಾಭಾರತದಲ್ಲಿ ಇನ್ನೊಂದು ಉಲ್ಲೇಖವೆಂದರೆ ಅಹಿಛಾತ್ರ ಎಂಬ ನಗರ ಪಾಂಚಾಲ ದೇಶದ ರಾಜಧಾನಿ ಆಗಿರುತ್ತದೆ. ಅಲ್ಲಿ ಪರಶುರಾಮನ ಬ್ರಾಹ್ಮಣರು

* World Tamil conference - 2010 www.dc-e-paper.com

ನೆಲೆಸಿರುತ್ತಾರೆ ಎಂದಿದೆ. ಪರಶುರಾಮನ ಬ್ರಾಹ್ಮಣರೆಂದರೆ ಸಾರಸ್ವತ ಬ್ರಾಹ್ಮಣರೇ ಆಗಿರುತ್ತಾರೆ. ಈ ಸ್ಥಳದ ಅವಶೇಷಗಳು ಈಗಿನ ಉತ್ತರ ಪ್ರದೇಶದ ರಾಮನಗರ ಎಂಬಲ್ಲಿವೆ.

* ಸಾರಸ್ವತರ ಬಗ್ಗೆ ರಾಮಾಯಣದಲ್ಲೂ ಒಂದು ಸನ್ನಿವೇಶವಿದೆ.

ಮಹಾಯಜ್ಞವನ್ನು ನಡೆಸುತ್ತಿದ್ದ ರಾಮಚಂದ್ರನು ಲಕ್ಷ್ಮಣನನ್ನು ಕರೆದು ಊರಿನಲ್ಲಿರುವ ಬ್ರಾಹ್ಮಣರನ್ನೆಲ್ಲಾ ಕರೆದುತರಲು ತಿಳಿಸುತ್ತಾನೆ. ಆಗ ಲಕ್ಷ್ಮಣನು ಕೆಲವೇ ಬ್ರಾಹ್ಮಣರನ್ನು ಕರೆದುತಂದಾಗ, ಚಕಿತಗೊಂಡ ರಾಮಚಂದ್ರ ಉಳಿದವರೆಲ್ಲಾ ಎಲ್ಲಿ ಎಂದು ವಿಚಾರಿಸುತ್ತಾನೆ. ಆಗ ಲಕ್ಷ್ಮಣನು ಅವರೆಲ್ಲ ಮೀನನ್ನು ಆಹಾರವನ್ನಾಗಿ ಉಪಯೋಗಿಸುವುದರಿಂದ ಬ್ರಾಹ್ಮಣರಲ್ಲವೆಂದು ಕರೆದುತರಲಿಲ್ಲ ಎಂದಾಗ ರಾಮಚಂದ್ರನು ಸಾರಸ್ವತ ಬ್ರಾಹ್ಮಣರ ಆಹಾರ ಪದ್ಧತಿಯನ್ನು ಲಕ್ಷ್ಮಣನಿಗೆ ತಿಳಿಸಿ ಅವರನ್ನೂ ಸಹ ಬ್ರಾಹ್ಮಣರೆಂದೇ ಪರಿಗಣಿಸಬೇಕು ಎನ್ನುತ್ತಾನೆ.

ಭೌಗೋಳಿಕ ದಾಖಲೆಗಳ ಪ್ರಕಾರ ಸಾರಸ್ವತರು ಸುಮಾರು ಕ್ರಿಪೂ. ೨೦೦೦-೧೫೦೦ರಲ್ಲಿ ಮಧ್ಯ ಏಷ್ಯಾಪ್ರಾಂತದಿಂದ ಹಿಂದುಖುಷ್ ಪರ್ವತ ಹಾಗೂ ಖೈಬರ್ ಪಾಸ್‌ಗಳನ್ನು ದಾಟಿ ಭಾರತದೇಶಕ್ಕೆ ವಲಸೆ ಬಂದ ಆರ್ಯ ಜನಾಂಗಕ್ಕೆ ಸೇರಿದ ಸಮುದಾಯವಾಗಿದೆ ಎನ್ನಲಾಗಿದೆ. ಹೀಗೆ ಬಂದ ಜನಸಮುದಾಯ ಈಗಿನ ಪಂಜಾಬ್ ಮತ್ತು ರಾಜಸ್ಥಾನಗಳ ಮಧ್ಯೆ ಹರಿಯುತ್ತಿದ್ದ ಸರಸ್ವತಿ ನದಿಯಲ್ಲಿ ನೆಲೆಯೂರಿದ್ದ ಹಾಗೂ ಅಲ್ಲಿ ತಂಗಿದ್ದ ಮಹಾತಪಸ್ವಿ ಸಾರಸ್ವತ ಮುನಿಗಳ ಭಕ್ತರಾಗಿದ್ದರಿಂದಲೂ ಸಾರಸ್ವತ ಬ್ರಾಹ್ಮಣರೆಂದು ನಾಮಾಂಕಿತಗೊಂಡರು ಎನ್ನಲಾಗಿದೆ. ವಿಂಧ್ಯಪರ್ವತದ ಉತ್ತರ ಭಾಗದಲ್ಲಿರುವವರನ್ನು ಗೌಡ ಬ್ರಾಹ್ಮಣರೆಂದು, ದಕ್ಷಿಣದಲ್ಲಿರುವವರನ್ನು ದ್ರಾವಿಡ ಬ್ರಾಹ್ಮಣರೆಂದು ವಿಭಜಿಸಲಾಯಿತು. ಇವರಲ್ಲಿ ಗೌಡ ಸಾರಸ್ವತರು ಗೋವೆಗೆ ವಲಸೆಬಂದರು ಎನ್ನಲಾಗಿದೆ.

ಸಾರಸ್ವತಗೌಡ ಬ್ರಾಹ್ಮಣರಲ್ಲಿ ಪಂಚಗೌಡ ಎಂಬ ಐದು ಮುಖ್ಯ ಪಂಗಡಗಳಿವೆ.

೧. ಸಾರಸ್ವತ; ೨. ಕನ್ಯಾಕುಬ್ಜ; ೩. ಗೌಡ; ೪. ಉತ್ಕಲ; ೫. ಮೈಥಿಲಾ

ಸರಸ್ವತಿಯ ನದಿಯ ತೀರದಲ್ಲಿ ವಾಸಿಸಲಾರಂಭಿಸಿದ ಸಾರಸ್ವತರು ಕೃಷಿಯನ್ನು ತಮ್ಮ ಮೂಲ ವೃತ್ತಿಯನ್ನಾಗಿಸಿಕೊಂಡಿದ್ದು ವಿದ್ಯೆಗೂ ಸಹ ಪ್ರಾಮುಖ್ಯತೆ ನೀಡಿದರು. ಗುರುಕುಲಗಳಲ್ಲಿ ವೇದ ಪಠಣವನ್ನು ಮಾಡುತ್ತಿದ್ದ ವಿದ್ಯಾರ್ಥಿಗಳು ಸಂಸ್ಕೃತದಲ್ಲೇ ಸಂವಹನ ನಡೆಸುತ್ತಿದ್ದರು. ಮನೆಗಳಲ್ಲೂ ಸಹ ಸಂಸ್ಕೃತವನ್ನು ಸರಳೀಕರಿಸಿ ಸಿದ್ಧಪಡಿಸಿದ ಬ್ರಾಹ್ಮಣಿ ಭಾಷೆಯನ್ನು ಮಾತನಾಡುತ್ತಿದ್ದು, ಆ ಭಾಷೆಯೇ ಮತ್ತಷ್ಟು ಸರಳಗೊಂಡು ಕೊಂಕಣಿ ಭಾಷೆಯಾಯಿತೆನ್ನಲಾಗಿದೆ.

---

* www.saraswathhistory.com

## ಭಾರತದ ಇತರ ಭಾಗಗಳಿಗೆ ವಲಸೆ

ಸರಸ್ವತಿ ನದಿಯ ತೀರದಲ್ಲಿ ನೆಲೆಸಿದ್ದ ದಧೀಚಿ ಮುನಿಗಳ ಮಗನಾದ ಸಾರಸ್ವತ ಮುನಿಗಳಿಗೆ ಷಟ್‌ಸಹಸ್ರ (೬೦,೦೦೦) ಸಾರಸ್ವತ ಬ್ರಾಹ್ಮಣರು ಶಿಷ್ಯರಾಗಿದ್ದರೆನ್ನಲಾಗಿದೆ. ಒಮ್ಮೆ ಹನ್ನೆರಡು ವರ್ಷಗಳ ಕಾಲ ತೀವ್ರ ಬರಗಾಲ ಕಾಣಿಸಿಕೊಂಡು ಜನ ಜೀವನವೇ ಅಸ್ತವ್ಯಸ್ತವಾಯಿತು. ಸರಸ್ವತಿ ನದಿಯ ಮೂಲವು ಒಣಗುತ್ತಾ ಬಂದು ನದಿ ತಂತಾನೇ ಹಿಂಗಿಯೇ ಹೋಯಿತು. ಬೆಳೆಗಳು ನಾಶವಾಗಿ ಜನರು ಊಟಕ್ಕೂ ಗತಿಯಿಲ್ಲದಾಗಿ ಪರದಾಡಬೇಕಾಯಿತು. ಸಾವು ನೋವುಗಳು ಹೆಚ್ಚಾಗಿ ಹಸಿವಿನಿಂದ ಕಂಗಾಲಾದ ಬ್ರಾಹ್ಮಣರಿಗೆ ಮುನಿಗಳೇ ಕೆರೆ–ತೊರೆಗಳಲ್ಲಿ ಸಿಗುವ ಮೀನುಗಳನ್ನು ಆಹಾರವಾಗಿ ಸೇವಿಸಿ ಜೀವ ಉಳಿಸಿಕೊಳ್ಳುವಂತೆ ಆದೇಶ ನೀಡಿದರೆನ್ನಲಾಗಿದೆ. ಹಾಗಾಗಿ ಶುದ್ಧ ಶಾಕಾಹಾರಿಗಳಾಗಿದ್ದ ಸಾರಸ್ವತರು ಮೀನು ತಿನ್ನುವ ಬ್ರಾಹ್ಮಣರಾಗಿ ಪರಿವರ್ತನೆಗೊಂಡರು. ಇದರಿಂದಾಗಿ ಕೆಲವು ಕಡೆ ಇತರ ಬ್ರಾಹ್ಮಣ ಪಂಗಡಗಳು ಇವರನ್ನು ಬ್ರಾಹ್ಮಣರೆಂದು ಗುರುತಿಸದೆ ಮೂದಲಿಸುತ್ತಿದ್ದರು.

ಬರಗಾಲದ ತೀವ್ರತೆಯನ್ನು ಸಹಿಸಲಾಗದಂತಾದಾಗ ಸಾರಸ್ವತ ಮುನಿಗಳೇ ತಮ್ಮ ಶಿಷ್ಯರಿಗೆ ಒಳ್ಳೆಯ ಮಳೆ–ಬೆಳೆ ಇರುವ ಪ್ರದೇಶಗಳಿಗೆ ಹೋಗಿ ನೆಲೆಸಲು ತಿಳಿಸುತ್ತಾರೆ. ಹಾಗಾಗಿ ಕೆಲವರು ತಮ್ಮ ಇಚ್ಛಾನುಸಾರ ದಕ್ಷಿಣ, ಪೂರ್ವ, ಪಶ್ಚಿಮ ಭಾರತದ ಭಾಗಗಳಿಗೆ ವಲಸೆ ಹೋಗುತ್ತಾರೆ.

ಉತ್ತರದ ಕಾಶ್ಮೀರದಲ್ಲಿ ನೆಲೆಸಿದ ಸಾರಸ್ವತರು ತಮ್ಮ ಸಂಸ್ಕೃತಿಯ ಜೊತೆಗೆ ಅಲ್ಲಿನ ಭಾಷೆ, ಆಚಾರ–ವಿಚಾರಗಳಿಗೆ ಹೊಂದಿಕೊಂಡು ಕಾಶ್ಮೀರ ಪಂಡಿತರೆನ್ನಿಸಿಕೊಂಡರು. ಪೂರ್ವ ಕರಾವಳಿಯಾದ ಬಂಗಾಲ ದೇಶಕ್ಕೆ ವಲಸೆಹೋದ ಸಾರಸ್ವತರು ಬಂಗಾಳಿ ಸಂಸ್ಕೃತಿಯನ್ನು ಸಹ ರೂಢಿಸಿಕೊಂಡರು. ದಕ್ಷಿಣಕ್ಕೆ ವಲಸೆ ಹೊರಟ ಸಾರಸ್ವತರು ಗೋದಾವರಿ ತೀರದಲ್ಲಿ ಪ್ರಯಾಣಿಸುತ್ತಾ ಗೋರಾಷ್ಟ್ರ – ಅಂದರೆ ಈಗಿನ ಗೋವಾನಗರದಲ್ಲಿ ನೆಲೆಯೂರಿದರು. *ತ್ರಿಹೋತ್ರಪುರದ ಗೌಡದೇಶದಿಂದ ಬಂದಿದುರಿಂದ ಗೌಡ ಸಾರಸ್ವತರು ಎಂದು ಕರೆಯಲ್ಪಟ್ಟರು. ನಂತರ ಪೋರ್ಚುಗೀಸರ ಆಡಳಿತದಲ್ಲಿ ಮತಾಂತರದ ಕ್ರೌರ್ಯವನ್ನು ತಾಳಲಾರದೆ ಕರ್ನಾಟಕದ ಕರಾವಳಿ ಪ್ರದೇಶಗಳಿಗೆ ವಲಸೆ ಹೊರಟರು. 'ಸ್ವಪ್ನ ಸಾರಸ್ವತ'ದ ಕಥಾವಸ್ತು ಕರ್ನಾಟಕಕ್ಕೆ ಬಂದ ವಲಸೆಯ ಮೇಲೆ ಆಧಾರಿತವಾಗಿದೆ.

## ಸರಸ್ವತಿ ನದಿಯ ಇತಿಹಾಸ

ದೇವಿ ಸರಸ್ವತಿಯ ಹೆಸರನ್ನು ಪಡೆದು ಉತ್ತರ ಭಾರತದ ಈಗಿನ ಪಂಜಾಬ್ ರಾಜಾಸ್ಥಾನ ರಾಜ್ಯಗಳ ಮಧ್ಯೆ ಹರಿಯುತ್ತಿದ್ದ ಸರಸ್ವತಿ ನದಿಯು ಅತಿ ಪವಿತ್ರವಾದ

---

* ಬಿಹಾರದಿಂದ ಗೋಮಂತಕ ನಗರಕ್ಕೆ ಸಾರಸ್ವತರು ವಲಸೆ ಬಂದ ವಿಷಯವರು ಸ್ಕಂದ ಪುರಾಣದ ಸಹ್ಯಾದ್ರಿಕಾಂಡದಲ್ಲಿ ಉಲ್ಲೇಖಿತವಾಗಿದೆ.

ನದಿಯೆಂದು ಶ್ರೇಷ್ಠತೆಪಡೆದಿತ್ತು. ಈ ನದಿಯ ತೀರದಲ್ಲಿ ಮಹಾತಪಸ್ವಿಗಳು ವೇದಗಳನ್ನು ರಚಿಸಿದರೆನ್ನಲಾಗಿದೆ *ಋಗ್ವೇದದಲ್ಲಿ ಸರಸ್ವತಿ ನದಿಯು ಅತಿ ಶುದ್ಧವಾದ, ಅತಿ ಪವಿತ್ರವಾದ, ಎಲ್ಲಾ ನದಿಗಳಿಗಿಂತಲೂ ಅತಿ ಶ್ರೇಷ್ಠವಾದ ನದಿ ಎಂದು ವಿವರಿಸಲಾಗಿದೆ. ಈ ನದಿಗೆ ಮೂಲವಾಗಿದ್ದ ಹಿಮಪರ್ವತವು ಸಂಪೂರ್ಣ ಕರಗುತ್ತಾ ಕಾಲಕ್ರಮೇಣ ಬತ್ತಿ ಹೋಗುತ್ತಿದ್ದಂತೆಯೇ ಸರಸ್ವತಿ ನದಿಯು ಹಿಂಗಿಹೋಯಿತೆನ್ನಲಾಗಿದೆ. ಕ್ರಿ.ಪೂ. ೧೦೦೦ದಲ್ಲೇ ಸರಸ್ವತಿ ನದಿಯು ಭೂಮಿಯಲ್ಲಿ ಮಾಯವಾಗಿಹೋಯಿತು. ಆದರೂ ಈಗಲೂ ಅಲಹಾಬಾದಿನ ಪ್ರಯಾಗದಲ್ಲಿ ಹರಿಯುವ ಗಂಗಾ-ಯಮುನಾ ನದಿಗಳ ಜೊತೆಗೆ ಸರಸ್ವತಿ ನದಿಯು ಗುಪ್ತಗಾಮಿನಿಯಾಗಿ ಹರಿದು ಸೇರುತ್ತದೆ ಎಂಬ ನಂಬಿಕೆಯಿದ್ದು, ಆ ಸ್ಥಳವು ಅತ್ಯಂತ ಪವಿತ್ರವಾದ 'ತ್ರಿವೇಣಿ ಸಂಗಮ' ಎಂಬ ಪುಣ್ಯಕ್ಷೇತ್ರವಾಗಿದೆ. ಹನ್ನೆರಡು ವರ್ಷಗಳಿಗೊಮ್ಮೆ ಅಲ್ಲಿ ನಡೆಯುವ ಜಗದ್ವಿಖ್ಯಾತ "ಕುಂಭ ಮೇಳ"ಕ್ಕೆ ಲಕ್ಷೋಪಲಕ್ಷ ಜನರು ಸೇರುತ್ತಾರೆ.

ಇತ್ತೀಚೆಗೆ ವೈಜ್ಞಾನಿಕವಾಗಿಯೂ ಉಪಗ್ರಹಗಳ ಅನ್ವೇಷಣೆಯ ವರದಿಯ ಪ್ರಕಾರ ಸಾವಿರಾರು ವರ್ಷಗಳ ಹಿಂದೆ ಉತ್ತರ ಭಾರತದಲ್ಲಿ ಸರಸ್ವತಿ ನದಿಯ ಸಮೃದ್ಧವಾಗಿ ಹರಿಯುತ್ತಿತ್ತು ಎಂಬುದನ್ನ ಸಾಬೀತು ಮಾಡಲಾಗಿದೆ.

## ಗೋವೆಯಲ್ಲಿ ಸಾರಸ್ವತರ ನೆಲೆ

ಸರಸ್ವತಿ ನದಿಯ ತೀರದಲ್ಲಿ ನೆಲೆಸಿದ್ದ ಸಾರಸ್ವತರು ಅಲ್ಲಿ ತಲೆದೋರಿದ ಹನ್ನೆರಡು ವರ್ಷಗಳ ಬರಗಾಲದ ತೀವ್ರತೆಯನ್ನು ತಡೆಯಲಾರದೆ ಮಳೆ-ಬೆಳೆ ಇರುವ ಪ್ರದೇಶಗಳಿಗೆ ವಲಸೆ ಹೊರಟರು. ದಕ್ಷಿಣ ದಿಕ್ಕಿನಲ್ಲಿ ವಲಸೆ ಹೊರಟವರು ಗೋದಾವರಿ ನದಿಯನ್ನು ದಾಟಿ ಹಾಗೆಯೇ ಸಮುದ್ರಯಾನದ ಮೂಲಕ ಗೋವೆಯನ್ನು ತಲುಪಿದರು. ಅಲ್ಲಿನ ಫಲವತ್ತಾದ ಭೂಮಿ, ವಿಪುಲ ನೈಸರ್ಗಿಕ ಸಂಪತ್ತನ್ನು ಕಂಡು ಅಲ್ಲೇ ನೆಲೆಹೂಡಲು ನಿರ್ಧರಿಸಿದರು. ಸುಮಾರು ಕ್ರಿ.ಶ. ೭೦೦ ರಲ್ಲಿ ಅಂಗಿರಸ ಮತ್ತು ಭಾರ್ಗವ ಎಂಬ ಸಾರಸ್ವತ ಪಂಗಡಗಳು ಗೋವೆಯಲ್ಲಿ ನೆಲೆಸಿದುವು. ನಂತರ ಕೌಂಡಿನ್ಯ, ವಾತ್ಸ್ಯ ಹಾಗೂ ಕೌಶಿಕ ಗೋತ್ರದ ಸಾರಸ್ವತರು ಸಹ ಗೋವೆಯನ್ನು ಪ್ರವೇಶಿಸಿ ಕೆಲೋಶಿ ಹಾಗೂ ಕುಶಾಸ್ಥಲ ಎಂಬ ಹಳ್ಳಿಗಳಲ್ಲಿ ನೆಲೆಸಿದರು. ಬಹುತೇಕ ಸಾರಸ್ವತರು ಕೃಷಿಯನ್ನು ವೃತ್ತಿಯಾಗಿ ಕೈಗೊಂಡರೂ, ವಿದ್ಯಾವಂತರಾದ ಇವರಿಗೆ ಶಿಕ್ಷಕ, ಕಾರಣಿಕ ಹಾಗೂ ಇತರ ಸಹಕಾರಿ ನೌಕರಿಗಳು ಸಹ ಹುಡುಕಿಕೊಂಡು ಬಂದವು. ಯಾವುದೇ ಲೆಕ್ಕ ಪತ್ರಗಳ ಹುದ್ದೆಗಳಿದ್ದರೂ ಸಾರಸ್ವತರನ್ನೇ ನೇಮಕ ಮಾಡುತ್ತಿದ್ದರೆನ್ನಲಾಗಿದೆ.

ಕ್ರಿ.ಪೂ. ೧೦೦೦ದಲ್ಲಿ ಗೋವೆಗೆ ವಲಸೆ ಬಂದ ಗೌಡ ಸಾರಸ್ವತರು ಎರಡು ಗುಂಪುಗಳಾಗಿ ವಿಂಗಡಣೆಯಾಗಿ ನೆಲೆಸಿದರು. ಮೂವತ್ತು ಕುಟುಂಬಗಳು ನೆಲೆಸಿದ ಹಳ್ಳಿ ತೀಸ್‌ವಾಡಿಯಾಯಿತು ಹಾಗೂ ಅರವತ್ತಾರು ಕುಟುಂಬಗಳು ಒಂದೆಡೆ ನೆಲೆಗಿಂತ ಹಳ್ಳಿ

---

* ಸರಸ್ವತಿ ಹಾಗೂ ದೃಷದ್ವತಿ ನದಿಗಳು ಈಗಿನ ಕುರುಕ್ಷೇತ್ರ ನಗರದಲ್ಲಿ ಹರಿಯುತ್ತಿದ್ದು, ಅಲ್ಲಿನ ಫಲವತ್ತಾದ ಪ್ರದೇಶವನ್ನು ಸಾರಸ್ವತ ದೇಶವೆಂದು ಕರೆಯಲಾಗಿದ್ದು, ಆ ಸ್ಥಳವೇ ಸಾರಸ್ವತರ ಮೂಲನೆಲೆ ಎನ್ನಲಾಗಿದೆ.

ಸಾಸಷ್ಟಿ ಎಂದೆನಿಸಿತು. ಕನ್ಯಾಕುಬ್ಜದಿಂದ ಬಂದ ಸಾರಸ್ವತರು ತೀಸ್‌ವಾಡಿಯಲ್ಲಿ ಬಿಡುಬಿಟ್ಟರೆ ಮಿಥಿಲಾದಿಂದ ಬಂದ ಗೌಡ ಸಾರಸ್ವತರು ಸಾಸಷ್ಟಿಯ ನಿವಾಸಿಗಳಾದರು. ಈ ಎರಡೂ ಕುಟುಂಬಗಳು ಒಟ್ಟಾಗಿ 'ಸಹನವೀಸ್' (ತೊಂಬತ್ತಾರು) ಎಂದಾಗಿ 'ಶೆನ್ವೀಸ್' ಎಂಬ ಪಂಗಡವಾಯಿತು. ಇವರಲ್ಲಿ ಭಾರದ್ವಜ, ಕೌಶಿಕ, ವಾತ್ಸ್ಯ, ಕೌಂಡಿನ್ಯ, ಕಶ್ಯಪ, ವಶಿಷ್ಠ, ಜಮದಗ್ನಿ, ವಿಶ್ವಾಮಿತ್ರ, ಗೌತಮ ಮತ್ತು ಅತ್ರಿ ಎಂಬ ಹತ್ತು ಗೋತ್ರಗಳವರಿದ್ದರು. ಈ ವಲಸೆ ಪ್ರಕ್ರಿಯೆ ನೂರಾರು ವರ್ಷಗಳವರೆಗೆ ನಿರಂತರ ನಡೆದಿದ್ದು ಸಾರಸ್ವತರು ಗೋವೆಯ ವಿವಿಧ ಹಳ್ಳಿಗಳಲ್ಲಿ ಹಾಗೂ ನಂತರ ಕರ್ನಾಟಕವೂ ಸೇರಿದಂತೆ ಸುತ್ತ ಮುತ್ತ ಕರಾವಳಿ ಪ್ರದೇಶಿಗಳಲ್ಲಿ ನೆಲೆಸಿದರು.

## ಗೋವೆಯಲ್ಲಿ ಮೂಲ ಸಂಸ್ಕೃತಿ

ಸಾರಸ್ವತರು ಯಾವುದೇ ಪ್ರಾಂತ್ಯದಲ್ಲಿ ನೆಲಯೂರಲಿ, ತಮ್ಮ ಸಂಸ್ಕೃತಿ ಹಾಗೂ ಭಾಷೆಗೆ ಪ್ರಾಮುಖ್ಯತೆ ನೀಡಿ ತಮ್ಮದೇ ಆದ ಪ್ರತ್ಯೇಕ ಐಡೆಂಟಿಟಿಯನ್ನು ಉಳಿಸಿಕೊಂಡಿದ್ದಾರೆ. ಮೂಲತಃ ಸಾರಸ್ವತರು ಸ್ಮಾರ್ತರಾಗಿದ್ದರು. ತದನಂತರ ಕೆಲವರು ವೈಷ್ಣವಧರ್ಮಿಗಳೂ ಆದರು. ಅವರು ಗಣೇಶ, ಶಿವ, ವಿಷ್ಣು, ದೇವಿ ಹಾಗು ಸೂರ್ಯ ಈ ಐದು ದೈವಗಳ ಆರಾಧಕರಾಗಿದ್ದರು. ಜೀವನ ನಿರ್ವಹಣೆಗೆ ಕೃಷಿಯನ್ನು ವೃತ್ತಿಯನ್ನಾಗಿಸಿಕೊಂಡಿದ್ದ ಸಾರಸ್ವತರು ವಿದ್ಯಾವಂತರೂ ಆಗಿದ್ದು ಇತರ ಸರಕಾರಿ ಹುದ್ದೆಗಳಿಗೂ ನೇಮಕಗೊಂಡಿದ್ದರು. ಗೋವೆಯು ಬಂದರು ಪ್ರದೇಶವಾದ್ದರಿಂದ ಅಲ್ಲಿಗೆ ಹೊರದೇಶಗಳಿಂದ ಹಡಗುಗಳಲ್ಲಿ ಬರುತ್ತಿದ್ದ ಸರಕುಗಳ ವ್ಯಾಪಾರದಲ್ಲೂ ತೊಡಗಿಸಿಕೊಂಡಿದ್ದರು.

ಹಳ್ಳಿಗಳಲ್ಲಿ ಸರಳ ಜೀವನವನ್ನು ನಡೆಸುತ್ತಾ ಜನಪರ ಸಂಸ್ಕೃತಿಯನ್ನು ತಮ್ಮದಾಗಿಸಿಕೊಂಡು ಸಂತೃಪ್ತ ಜೀವನ ನಡೆಸುತ್ತಿದ್ದ ಸಾರಸ್ವತರನ್ನು 'ಸ್ವಪ್ನ ಸಾರಸ್ವತ'ದಲ್ಲಿ ಕಾಣಬಹುದು. "ಗೋವಾ ಪ್ರಾಂತ್ಯದ ವೆರಣಿಯಲ್ಲಿ ಸಮೃದ್ಧವಾಗಿ ವ್ಯಾಪಾರ. ಕೃಷಿ ಆದಾಯ ಎರಡರಲ್ಲೂ ತೊಡಗಿಸಿಕೊಂಡು ದೊಡ್ಡ ಅನುಕೂಲದಲ್ಲಿ ಬದುಕುತ್ತಿದ್ದ ಕೌಂಶಗೋತ್ರದ ವಿಟ್ಠುಪೈಯ ಅಜ್ಜ ನರಸಪ್ಪಯ್ಯ ವರುಣಾಪುರದ ಸದ್ಗೃಹಸ್ಥರಲ್ಲಿ ಒಬ್ಬರೆಂದು ತುಂಬ ಹೆಸರುವಾಸಿ. ಅವರಿಲ್ಲದೇ ಸಾಸಷ್ಟಿಯ ಅರವತ್ತಾರು ಕುಟುಂಬಗಳಲ್ಲಿ ಯಾವುದೇ ಶುಭ ಸಮಾರಂಭಗಳೂ ನಡೆಯುತ್ತಿರಲಿಲ್ಲ ಅನ್ನುವುದು ಆಗಿನ ಹೇಳಿಕೆ. ವರುಣೆಯ ಅಗ್ರಹಾರದಲ್ಲಿ ನರಸಪ್ಪಯ್ಯನವರದು ದೊಡ್ಡ ಮನೆ. ಅಕ್ಕಿ, ಬೆಲ್ಲ, ತುಪ್ಪ, ಜೇನುತುಪ್ಪ, ಎಣ್ಣೆ, ತೆಂಗಿನಕಾಯಿ, ತೆಂಗಿನ ನಾರಿನ ಜಂಗು, ಅಳಲೇಕಾಯಿ, ಹುಣಸೇ ಹಣ್ಣು, ಮೇಣ, ಗಂಧ, ಕರಿಮೆಣಸು ಇವುಗಳ ವ್ಯಾಪಾರ ಅವರಿಗೆ. ಕಾಡಿನ ಕಡೆಯಿಂದ ಬರುವ ಕುಡುಂಬಿಯರು ತಾವು ಶೇಖರಿಸಿದ ವಸ್ತುಗಳನ್ನು ಅವರಿಗೆ ಮಾರುವುದು, ಅವರಿಗೆ ಬೇಕಾದ ವಸ್ತುಗಳನ್ನು ನರಸಪ್ಪಯ್ಯನವರು ಕೊಡುವುದು ಹೀಗೆ ಅವರ ವ್ಯಾಪಾರ, ಜುವಾರಿ ನದಿಗೆ ಹೋಗಿ

ಸೇರುವ ಅಗಲವಾದ ಹೊಳೆಯಲ್ಲಿ ಮಚ್ಚೆಗಳನ್ನು ಹರಿಸಿಕೊಂಡು ಬರುತ್ತಿದ್ದ ಅರಬರ ಜೊತೆಯೂ ನರಸಪ್ಪಯ್ಯನವರಿಗೆ ವ್ಯಾಪಾರ. ವಿಜಯನಗರದ ಅರಸರ ಆಳ್ವಿಕೆಯ ಸಮಯ ಅವರದ್ದು ಊರ್ಜಿತಗೊಂಡ ವ್ಯಾಪಾರ, ಮನೆಯ ಹಜಾರದ ಒಂದು ಭಾಗವೇ ಅವರ ಮಳಿಗೆ. ನರಸಪ್ಪಯ್ಯ ಅಲ್ಲಿ ಚಕ್ಕಳ ಮಕ್ಕಳ ಕುಳಿತು ವ್ಯವಹಾರ ನಡೆಸುವುದು, ಅವರ ಮನಸ್ಸು ವಿಶಾಲವೂ, ಮೃದುವೂ ಆಗಿದ್ದುದರಿಂದ ದಾನ ಧರ್ಮಗಳೂ ಹೆಚ್ಚು" [ಸ್ವಸಾ. ಪುಟ ೩]

ತಮ್ಮ ಕುಲದೇವತೆ ಮಹಾಲಸದೇವಿಯನ್ನು ಭಯ ಭಕ್ತಿಗಳಿಂದ ಆರಾಧಿಸುತ್ತಾ ಯಾವುದೇ ಶುಭಸಮಾರಂಭಗಳಿಗೂ ಮುನ್ನ ಆಕೆಗೆ ಪೂಜೆ ಸಲ್ಲಿಸುತ್ತಿದ್ದರು. "ಪುರೋಹಿತ ರಂಗಶರ್ಮರು ಪೂಜೆ ಮಾಡುವ ಮಹಾಲಸ ದೇವಿಯ ವಿಗ್ರಹವು ಅತ್ಯಂತ ಶ್ರೇಷ್ಠವಾಗಿಯೂ ಪವಿತ್ರವಾಗಿಯೂ ಪುರಾತನವಾಗಿಯೂ ಇದ್ದು ನೋಡಲು ಬಹಳ ಸುಂದರವಾಗಿಯೂ ಇತ್ತು. 'ಅಂದವಾದ ಮುಖ, ನಾಲ್ಕು ಕೈಗಳು, ಕೊರಳಿನಿಂದ ಇಳಿದು ಮೊಲೆಗಳ ಮೇಲೆ ಹಾದ ಮಾಲೆ, ಬಿಳಿಯ ಶಿಲೆಯ ಮೇಲೆ ಸ್ಪಷ್ಟವಾದ ಕಣ್ಣು ಮೂಗುಗಳ ವಿನ್ಯಾಸ. ದೇವಿಯ ಮೇಲಿನ ಕೈಗಳಲ್ಲಿ ಒಂದರಲ್ಲಿ ತ್ರಿಶೂಲ, ಇನ್ನೊಂದರಲ್ಲಿ ಪಂಚಪಾತ್ರೆ, ಕೆಳಗಿನ ಕೈಗಳಲ್ಲಿ ಒಂದರಲ್ಲಿ ಖಡ್ಗ, ಇನ್ನೊಂದರಲ್ಲಿ ಅದೇ ತಾನೇ ಕಡಿದ ರಕ್ತ ಸುರಿಯುವ ರುಂಡ, ಸಿಂಹದ್ದೋ ಹುಲಿಯದ್ದೋ ಮುಖವನ್ನು ಹೋಲುವ ಮಾನವಾಕಾರದ ಒಂದು ಜೀವಿಯ ಮೇಲೆ ದೇವಿ ಕುಣಿಯುವ ಭಂಗಿಯಲ್ಲಿ ನಿಂತಿದ್ದಳು. ಕೊರಳಿಗೆ ಹಾಕಿದ ಮಾಲೆ ಯಾವುದರಿಂದ ಮಾಡಿದ್ದು ಎಂದು ಸ್ಪಷ್ಟವಾಗಿ ತಿಳಿಯದಿದ್ದರೂ ಬಹುಶಃ ರುಂಡಮಾಲೆಯೇ ಇರಬೇಕೆಂದು ರಂಗಶರ್ಮರ ಅಂಬೋಣ. ಆಕೆ ವಿಷ್ಣುವಿನ ಸ್ತ್ರೀರೂಪ ಎಂದು ಪುರಾಣಗಳು ಹೇಳುತ್ತಿದ್ದುದರಿಂದ ನಾರಾಯಣಿ ಎಂಬ ಉಪನಾಮವೂ ಆಕೆಗೆ ಸೇರಿತ್ತು. ಬೆಳಗಿನ ಹೊತ್ತು ಸರಸ್ವತಿಯಾಗಿಯೂ, ಮಧ್ಯಾಹ್ನ ಪಾರ್ವತಿಯಾಗಿಯೂ, ಸಂಜೆ ಲಕ್ಷ್ಮಿಯಾಗಿಯೂ ಕಾಣುತ್ತಾಳೆಂದು ಎಲ್ಲರೂ ಹೇಳುತ್ತಾರೆ" [ಸ್ವಸಾ. ಪುಟ ೪] ಪರಶುರಾಮನೇ ಬೇತಾಳ ಸನ್ಯಾಸಿಯ ಮೂಲಕ ಈ ಮೂರ್ತಿಯನ್ನು ಸ್ಥಾಪಿಸಿದ್ದು ಎಂದು ನಂಬಿದ್ದ ಜನ ಆಕೆಯೇ ತಮ್ಮೆಲ್ಲರನ್ನು ಕಾಪಾಡುವ ತಾಯಿ 'ಮ್ಹಾಳಶಿಮಾಂಯಿ' ಎಂದು ಭಕ್ತಿ ಮಮತೆಯಿಂದ ಶರಣಾಗುತ್ತಿದ್ದರು.

ಏನೇ ಕಷ್ಟ–ನಷ್ಟಗಳಾದರೂ ಅದು ಗ್ರಹಬಲದ ದುರ್ದಶೆಯೆಂದು ನಂಬಿ ಅದಕ್ಕೆ ತಕ್ಕ ಪೂಜೆಪುನಸ್ಕಾರಗಳಲ್ಲಿ ತೊಡಗುತ್ತಿದ್ದರು. ಎಲ್ಲಾ ವರ್ಗದ ಜನರೊಡನೆ, ಇತರ ಜಾತಿಯವರೊಡನೆ ಸೌಹಾರ್ದತೆಯಿಂದಿದ್ದು ಶಾಂತಿಯುತ ಜೀವನವನ್ನು ನಡೆಸುತ್ತಿದ್ದರು. ಯಾವುದೇ ಪರಿಸ್ಥಿತಿಯಲ್ಲಿ ಇತರರಿಗೆ ತೊಂದರೆಕೊಡದೆ ಸಮಸ್ಯೆಗಳನ್ನು ಹುಟ್ಟಿಸದೆ ಸುಸಂಸ್ಕೃತ ಜೀವನವನ್ನು ನಡೆಸುತ್ತಿದ್ದರು.

**ಧಾರ್ಮಿಕ ಬದಲಾವಣೆಗಳು**

ಗೋವೆಗೆ ವಲಸೆ ಬಂದ ಸಾರಸ್ವತರು ತಮ್ಮ ಮೂಲ ಧರ್ಮ ಗುರುಗಳು ಹಾಗೂ ಮಠಗಳಿಂದ ಬೇರ್ಪಟ್ಟರು ತಮ್ಮ ಧರ್ಮವನ್ನು ಕಾಪಾಡಿಕೊಳ್ಳಲು ಗುರುವಿನ ಮಾರ್ಗದರ್ಶನ ಅತ್ಯವಶ್ಯಕವೆಂದು ಕಾಶ್ಮೀರ ಮಠಕ್ಕೆ ಮನವಿ ಸಲ್ಲಿಸಿದಾಗ ಗೌಡಪಾದ ಸಾಂಪ್ರದಾಯದ ಸ್ವಾಮಿ ವಿವರಾನಂದರು ಕ್ರಿ.ಶ. ೭೪೦ರಲ್ಲಿ ಗೋವೆಗೆ ಆಗಮಿಸಿ ಕೌಶಸ್ಥಾಲಿ ಎಂಬ ಸ್ಥಳದಲ್ಲಿ ಸಾರಸ್ವತ ಮಠವನ್ನು ಸ್ಥಾಪಿಸಿದರು. ಗೋವೆಯ ಹಾಗೂ ಕೊಂಕಣ ಪ್ರದೇಶಿದ ಸಾರಸ್ವತರು ಈ ಮಠದ ಅನುಯಾಯಿಗಳಾದರು. ಇವರು ಅದ್ವೈತ ಧರ್ಮವನ್ನು ಪಾಲಿಸುತ್ತಿದ್ದು ಶಿವ, ವಿಷ್ಣು, ಗಣಪತಿ, ಶಕ್ತಿ ಮತ್ತು ಸೂರ್ಯದೇವರ ಆರಾಧಕರಾಗಿದ್ದರು.

ಸುಮಾರು ಕ್ರಿ.ಶ. ೧೨೫೪ರಲ್ಲಿ ದ್ವೈತ ಧರ್ಮಗುರು ಸ್ವಾಮಿ ಮದ್ವಾಚಾರ್ಯರು ಗೋವೆಗೆ ಆಗಮಿಸಿದಾಗ ಅವರ ಪ್ರೇರಣೆಯಿಂದ ಹಲವಾರು ಸಾರಸ್ವತ ಕುಟುಂಬಗಳು ವೈಷ್ಣವ ಧರ್ಮದ ಅನುಯಾಯಿಗಳಾದುವು. ನಂತರ ಸ್ವಾಮಿ ಪದ್ಮನಾಭತೀರ್ಥರು ಗೋವೆಯಲ್ಲಿ ಚಾತುರ್ಮಾಸ್ಯ ನಡೆಸಿದಾಗ ಸಾಸಷ್ಟಿ ಮತ್ತು ಬಾರ್ದೇಶ ಪ್ರದೇಶದ ಬಹುತೇಕ ಸಾರಸ್ವತರು ವೈಷ್ಣವ ಧರ್ಮವನ್ನು ಕೈಗೊಂಡರು. ಆದರೂ ತಮ್ಮ ಮೂಲ ಸ್ಮಾರ್ತ ಧರ್ಮದ ಕುಲದೇವತೆಗಳನ್ನು ಆರಾಧಿಸುವುದನ್ನು ಬಿಡಲಿಲ್ಲ. ಇಂದಿಗೂ ಸಾರಸ್ವತರು ಸ್ಮಾರ್ತ ಹಾಗೂ ವೈಷ್ಣವ ಧರ್ಮಗಳನ್ನು ಪಾಲಿಸುವುದನ್ನು ಕಾಣಬಹುದು.

ಕ್ರಿ.ಶ. ೧೫೬೪ರಲ್ಲಿ ಗೌಡಪಾದಚಾರ್ಯ ಮಠವನ್ನು ಪೋರ್ಚುಗೀಸರು ಧ್ವಂಸ ಮಾಡಿದರು. ಮತ್ತೇ ಗುರುಗಳನ್ನು, ಮಠವನ್ನು ಕಳೆದುಕೊಂಡ ಸಾರಸ್ವತರು ವಾರಣಾಸಿಯಲ್ಲಿ ನೆಲೆಸಿದ್ದ ಸ್ವಾಮಿ ಭಾವಾನಂದರನ್ನು ಗೋವೆಗೆ ಬಂದು ಮಠ ಸ್ಥಾಪಿಸಿಬೇಕಾಗಿ ವಿನಂತಿಸಿದರು. ಆಗ ಸ್ವಾಮಿ ಭಾವಾನಂದರು ತಮ್ಮ ಶಿಷ್ಯರಾದ ಸ್ವಾಮಿ ಸಚ್ಚಿದಾನಂದರನ್ನು ಗೋವೆಗೆ ಕಳುಹಿಸಿದರು. ಮೊದಲಿಗೆ ರತ್ನಗಿರಿಯಲ್ಲಿ ಉಳಿದುಕೊಂಡಿದ್ದು ಇವರು ಕ್ರಿ.ಶ. ೧೬೩೦ರಲ್ಲಿ ಕವಳೆ ಮಠವನ್ನು ಸ್ಥಾಪಿಸಿದರು. ಇಂದಿನ ಗೋವೆಯ ಪೋಂಡಾ ನಗರದಲ್ಲಿರುವ ಕವಳೆ ಮಠ ಸಾರಸ್ವತರ ಜೀವನದಲ್ಲಿ ಬಹು ಮಾನ್ಯತೆ ಪಡೆದಿದೆ.

ಪೋರ್ಚುಗೀಸರ ಕ್ರೌರ್ಯದಿಂದ ವಲಸೆ ಪ್ರಕ್ರಿಯೆ ಪ್ರಾರಂಭವಾದಾಗ ವೈಷ್ಣವ ಧರ್ಮ ಪಾಲಿಸುತ್ತಿದ್ದ ಸಾರಸ್ವತರು ಮಂಗಳೂರು ಹಾಗೂ ಭಟ್ಕಳದ ಕರಾವಳಿ ಪ್ರದೇಶಗಳಲ್ಲಿ, ನೆಲೆಸಿದರು. ಅಲ್ಲಿ ಸಾರಸ್ವತರೇ ಆಗಿದ್ದ ಉಡುಪಿ ಪಾಲಿಮಾರ ಮಠದ ಸ್ವಾಮಿ ನಾರಾಯಣ ತೀರ್ಥರು ವಲಸೆ ಬಂದ ಸಾರಸ್ವತರಿಗಾಗಿ ಭಟ್ಕಳದಲ್ಲಿ ಪ್ರತ್ಯೇಕ ಮಠವನ್ನು ಸ್ಥಾಪಿಸಿಕೊಟ್ಟರು. ನಂತರ ಅದನ್ನು ಗೋಕರ್ಣಕ್ಕೆ ಸ್ಥಳಾಂತರಿಸಲಾಯಿತು. ಕೆಲಸಮಯದ ನಂತರ ಗೋವೆಯ ಪಾರ್ಥಗಲಿಗೆ ವರ್ಗಾಯಿಸಿದ ಈ ಮಠ

ಗೋಕರ್ಣ–ಪಾರ್ಥಗಲಿ ಮಠವೆಂದೇ ಪ್ರಚಲಿತವಾಯಿತು. ಉತ್ತರ ಕನ್ನಡದ ಸಾರಸ್ವತರು ಈ ಮಠದ ಭಕ್ತರಾಗಿದ್ದು ವೀರ ವಿಠ್ಠಲನು ಇವರ ಆರಾಧ್ಯದೈವನಾಗಿದ್ದಾನೆ.

ಗೋವೆಯ ಕುಶಸ್ಥಲೀಕರ ಹಾಗೂ ಕೇಳೊಶಿಕರ ಸ್ಮಾರ್ತ ಸಾರಸ್ವತರು ಬಹುತೇಕ ಕನ್ನಡ ಜಿಲ್ಲೆಯಲ್ಲಿ ನೆಲೆಯೂರಿದರು. ಮೀನನ್ನು ಆಹಾರವನ್ನಾಗಿ ಬಳಸುತ್ತಿದ್ದರಿಂದ ಸಾರಸ್ವತರನ್ನು ಸ್ಥಳೀಯ ಬ್ರಾಹ್ಮಣರು ಬ್ರಾಹ್ಮಣರೆಂದು ಒಪ್ಪಿಕೊಳ್ಳದೆ ದೂರ ಇಟ್ಟರು. ಯಾವುದೇ ಧರ್ಮಗುರುವಿನ ಆಶ್ರಯವಿಲ್ಲದಿದ್ದ ಸಾರಸ್ವತರ ಬಗ್ಗೆ ರಾಜನಿಗೆ ದೂರಿತ್ತರು. ತಮ್ಮ ಗುರುವಿನ ಬಗ್ಗೆ, ಧರ್ಮದ ಬಗ್ಗೆ ಆದಷ್ಟು ಬೇಗ ವಿವರ ನೀಡಬೇಕೆಂದು ರಾಜನು ಆಜ್ಞೆ ಇತ್ತನು. ಆಗ ಉತ್ತರ ಭಾರತದಿಂದ ಧರ್ಮಪ್ರಚಾರಕ್ಕಾಗಿ ದಕ್ಷಿಣಕ್ಕೆ ಬಂದಿದ್ದ ಸಾರಸ್ವತ ಸ್ವಾಮಿ ಪರಿಜ್ಞಾನಾಶ್ರಮರನ್ನು ತಮ್ಮ ಸಮಸ್ಯೆಗಳನ್ನು ನಿವಾರಿಸಬೇಕಾಗಿ ಸಾರಸ್ವತರು ಬೇಡಿಕೊಂಡಾಗ ಅವರು ಗೋಕರ್ಣದಲ್ಲಿ ಮಠವನ್ನು ಸ್ಥಾಪಿಸಲು ಮುಂದಾದರು. ಆಗ ರಾಜನು ಈ ಮಠಕ್ಕೆ ಶೃಂಗೇರಿಯ ಸ್ವಾಮಿ ಶಂಕರಾಚಾರ್ಯರಿಂದ ಒಪ್ಪಿಗೆ ಪಡೆದು ಬರಬೇಕೆಂದು ಆದೇಶವನ್ನಿತ್ತಾಗ ಸ್ವಾಮಿ ಪರಿಜ್ಞಾನಾಶ್ರಮರು ಶೃಂಗೇರಿಗೆ ಹೋಗಿ ಒಪ್ಪಿಗೆ ಪಡೆದು ಬಂದರು. ಕ್ರಿ.ಶ. ೧೭೩೪ರಲ್ಲಿ ಎರಡನೆಯ ಬಸಪ್ಪನಾಯಕನು ಗೋಕರ್ಣದ ಈ ಮಠಕ್ಕೆ ಭೂಮಿಯನ್ನು ದಾನ ಮಾಡಿ ಮಠವನ್ನು ನಡೆಸಲು ದತ್ತಿ ನೀಡಿದನು. ಈ ಮಠದಲ್ಲಿ ಭವಾನಿಶಂಕರನನ್ನು ಆರಾಧಿಸುತ್ತಾರೆ.

ನಂತರ ಉತ್ತರ ಕನ್ನಡದ ಶಿರಾಳಿಯ ಹತ್ತಿರದ ಚಿತ್ತಾಪುರದಲ್ಲಿ ಸ್ವಾಮಿ ಶಂಕರಾಶರ್ಮರು ಮತ್ತೊಂದು ಮಠವನ್ನು ಸ್ಥಾಪಿಸಿದರು. ಈ ಮಠದ ಭಕ್ತರಾದ ಸಾರಸ್ವತರು ಕಾಲಕ್ರಮೇಣ ಗೋವೆಯ ಸಾರಸ್ವತರಿಂದ ದೂರವಾದರು.

ಹೀಗೆ ಕರ್ನಾಟಕದ ಕರಾವಳಿಯಲ್ಲಿ ನೆಲೆಯೂರಿದ ಸಾರಸ್ವತರು ತಮ್ಮ ಮೂಲಸಂಸ್ಕೃತಿಯ ಜೊತೆಗೆ ಕನ್ನಡ ಸಂಸ್ಕೃತಿಯನ್ನು ತಮ್ಮದಾಗಿಸಿಕೊಂಡು ಯಾವುದೇ ಸಮಸ್ಯೆಗಳನ್ನು ಸೃಷ್ಟಿಸದೆ, ಯಾವುದೇ ತೊಂದರೆಗಳಿಗೆ ಎಡೆಮಾಡಿಕೊಳ್ಳದೆ ಕನ್ನಡ ಜನಮನಗಳನ್ನು ಗೆದ್ದು ಕನ್ನಡ ನಾಡಿನಲ್ಲಿ ಸೌಹಾರ್ದತೆಯಿಂದ ನೆಲೆಸಿದರು.

## ವೃತ್ತಿ ಜೀವನ

ಯಾವುದೇ ಕಾಲದಲ್ಲಿ, ಯಾವುದೇ ಪ್ರಾಂತ್ಯದಲ್ಲಿ ಸಾರಸ್ವತರ ಅಸ್ತಿತ್ವದ ಉಲ್ಲೇಖವಿರಲಿ, ಅಲ್ಲೆಲ್ಲ ಅವರು ವೇದಪಾರಂಗತರು, ವಿದ್ಯಾ ಪ್ರವೀಣರು, ಯಾವುದೇ ವೃತ್ತಿ, ವ್ಯಾಪಾರಗಳಲ್ಲಿ ನಿಷ್ಣಾತರು ಎಂದೇ ದಾಖಲಾಗಿದೆ. ಜೀವನ ನಿರ್ವಹಣೆಗೆ ಕೃಷಿಯನ್ನು ವೃತ್ತಿಯನ್ನಾಗಿಸಿಕೊಂಡರೂ ಬಾಲಕರಿಗೆ ಉಪನಯನಮಾಡಿಸಿ ವಿದ್ಯಾಭ್ಯಾಸದಲ್ಲಿ ತೊಡಗಿಸುತ್ತಿದ್ದರು.

ಭೀಕರ ಬರಗಾಲದ ತೀವ್ರತೆಯನ್ನು ತಾಳಲಾರದೆ ಸರಸ್ವತಿ ನದಿಯ ತೀರದಿಂದ ಇತರ ಭಾಗಗಳಿಗೆ ವಲಸೆ ಹೊರಟ ಸಾರಸ್ವತರು ತಮ್ಮ ಪಾಂಡಿತ್ಯದಿಂದ, ಜಾಣ್ಮೆಯಿಂದ

ಒಳ್ಳೆಯ ಹುದ್ದೆಗಳನ್ನು ಗಿಟ್ಟಿಸಿಕೊಳ್ಳುವುದರಲ್ಲಿ ಯಶಸ್ವಿಯಾದರು. ಕೆಳದಿಯ ರಾಜನೊಬ್ಬ ಸಾರಸ್ವತರ ಜಾಣ್ಮೆಯಿಂದ ಎಷ್ಟು ಪ್ರಭಾವಿತನಾದನೆಂದರೆ ತನ್ನ ರಾಜ್ಯದ ಪ್ರತಿಯೊಂದು ಹಳ್ಳಿಯಲ್ಲಿಯೂ ಲೆಕ್ಕ ಪರಿಶೋಧಕರಾಗಿ, ಕಾರಣಿಕರಾಗಿ ಸಾರಸ್ವತರನ್ನೇ ನೇಮಕ ಮಾಡಬೇಕೆಂದು ಆಜ್ಞೆ ಹೊರಡಿಸಿದ್ದನಂತೆ. ಹಾಗೆಯೇ ಗೋವೆಯಲ್ಲಿ ಪೋರ್ಚುಗೀಸರ ಆಡಳಿತದ ಸಮಯದಲ್ಲೂ ಸಾರಸ್ವತರು ಹಲವಾರು ಸರಕಾರಿ ಹುದ್ದೆಗಳಿಗೆ ನೇಮಕಗೊಂಡಿದ್ದರೆನ್ನಲಾಗಿದೆ.

* ಮೊದಲನೆಯ ಮಹಾಯುದ್ಧದ ಸಮಯದಲ್ಲಿ ತಮ್ಮ ವ್ಯಾಪಾರಿ ಕೌಶಲಗಳನ್ನು, ನಾಲಿಗೆ ಬಲವನ್ನು ಉಪಯೋಗಿಸಿ ಹಲವಾರು ಸಣ್ಣ ಪುಟ್ಟ ವ್ಯಾಪಾರಗಳಲ್ಲಿ ತೊಡಗಿಸಿಕೊಂಡು ತಮ್ಮ ಆರ್ಥಿಕ ಮಟ್ಟವನ್ನು ಉತ್ತಮಗೊಳಿಸಿಕೊಂಡರು. ಭಾರತದಲ್ಲಿ ಬ್ರಿಟಿಷರ ಆಡಳಿತ ಪ್ರಾರಂಭವಾದಾಗ ಇಂಗ್ಲಿಷ್ ಕಲಿಯಲು ಮುಂದಾದರು. ಗಣಿತದಲ್ಲಿ, ವಾಣಿಜ್ಯ-ವ್ಯಾಪಾರ ತಂತ್ರಗಳಲ್ಲಿ ಚಾಣಕ್ಷರಾಗಿದ್ದ ಸಾರಸ್ವತರು ಸರಕಾರದಲ್ಲಿ ಕಲೆಕ್ಟರ್, ಕಮಿಷನರ್‌ಗಳಂತಹ ಉನ್ನತ ಹುದ್ದೆಗಳನ್ನು ನಿರ್ವಹಿಸಿದರು. ಜವಳಿ, ಕೈಗಾರಿಕೆ, ಆಮದು-ರಫ್ತು ಮೊದಲಾದ ಎಲ್ಲಾ ಕ್ಷೇತ್ರಗಳಲ್ಲೂ ಆಡಳಿತಾಧಿಕಾರಿಗಳಾದರು. ಮಂಗಳೂರಿನಿಂದ ಬಹುತೇಕ ಸಾರಸ್ವತರು ಮುಂಬೈಗೆ ತೆರಳಿ ಅಲ್ಲಿ ತಮ್ಮ ಸ್ವಂತ ಉದ್ದಿಮೆಗಳನ್ನು ಪ್ರಾರಂಭಿಸಿದರು. ಹಾಗಾಗಿ ಸಾರಸ್ವತರ ಆರ್ಥಿಕ ಹಾಗು ಸಾಮಾಜಿಕ ಜೀವನ ಶೈಲಿಗಳು ಸುಧಾರಿಸಿದುವು.

೨೦ನೇಯ ಶತಮಾನದ ಪ್ರಾರಂಭದಲ್ಲಿ ಸಾರಸ್ವತರು ತಮ್ಮದೇ ಬ್ಯಾಂಕುಗಳನ್ನು ತೆರೆದರು ಹಾಗು ದೇಶ ವಿದೇಶಗಳಲ್ಲಿ ಹೊಟೇಲು ಉದ್ದಿಮೆಯನ್ನು ಪ್ರಾರಂಭಿಸಿದರು. ೧೯೧೦ರಲ್ಲಿ ಕೆನರಾ ಬ್ಯಾಂಕನ್ನು ಹಾಗೂ ೧೯೨೫ರಲ್ಲಿ ಸಿಂಡಿಕೇಟ್ ಬ್ಯಾಂಕನ್ನು ಸ್ಥಾಪಿಸಿ ಸಾವಿರಾರು ಜನರಿಗೆ ಉದ್ಯೋಗಾವಕಾಶ ಕಲ್ಪಿಸಿದರು. ತದನಂತರ ವಿಜಯಾಬ್ಯಾಂಕ್, ಕರ್ನಾಟಕ ಬ್ಯಾಂಕ್, ಕಾರ್ಪೋರೇಷನ್ ಬ್ಯಾಂಕ್‌ಗಳು ಸ್ಥಾಪಿತವಾದುವು. ಉಡುಪಿ-ಕೃಷ್ಣ-ಸಾಗರ್-ಪೈ ಹೊಟೇಲುಗಳು ದೇಶ ವಿದೇಶಗಳಲ್ಲಿ ಪ್ರಚಲಿತವಾದುವು. ಹಲವಾರು ಉನ್ನತ ಶ್ರೇಣಿಯ ವಿದ್ಯಾ ಸಂಸ್ಥೆಗಳನ್ನು ಸಹ ಪ್ರಾರಂಭಿಸಿದರು.

ಸ್ವಪ್ನ ಸಾರಸ್ವತದಲ್ಲಿ ಆಸ್ತಿ-ಪಾಸ್ತಿಗಳನ್ನು ಕಳೆದುಕೊಂಡು ಬರಿಗೈಯಲ್ಲಿ ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ನೆಲೆಯೂರಿದ ಸಾರಸ್ವತರು ತಮ್ಮ ತಲೆ ಎತ್ತಿ ನಿಲ್ಲುವ ಛಲ ಹಾಗು ನಾಲಿಗೆಯ ಬಲದಿಂದ ಮತ್ತೇ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುತ್ತಾರೆ. ಅವರ ನಾಲಿಗೆ ಬಲದ ಚಾಣಾಕ್ಷತನ ಈ ಕೆಳಕಂಡ ಸನ್ನಿವೇಶದಲ್ಲಿ ವ್ಯಕ್ತವಾಗುತ್ತದೆ.

ವಲಸೆ ಪ್ರಕ್ರಿಯೆಯ ಹಾದಿ ಉದ್ದಕ್ಕೂ ಸಾವು ನೋವುಗಳನ್ನು ಅನುಭವಿಸುತ್ತಾ ಸಾರಸ್ವತರು ಚಿಳ್ಳುಡೆಯನ್ನು ತಲುಪುತ್ತಾರೆ. ಆಗ ಅಲ್ಲಿನ ಸೇನಾಧಿಕಾರಿಗಳು ಅವರನ್ನು ತಡೆದು ರತ್ನಾಕರ ನಾಯಕನೆಂಬುವನ ವಿಟ್ಟು ಪೈಯನ್ನು ಪ್ರಶ್ನಿಸುತ್ತಾನೆ.

---

* www.sarswathhistory.com

ರತ್ನಾಕರ ನಾಯಕ ಜೋರಾಗಿ ನಕ್ಕ.

"ನಾವು ಯಾರು ಗೊತ್ತೋ?" ಎಂದು ಕೇಳಿದ.

ವಿಟ್ಠು ಪೈ ಮತ್ತೆ ತಲೆಯಲ್ಲಾಡಿಸಿದ.

"ಕಾಳು ಮೆಣಸಿನ ರಾಣಿ ಚೆನ್ನಭೈರಾದೇವಿಯ ಹೆಸರು ಕೇಳಿದ್ದೀರೋ?" ಎಂಬ ಪ್ರಶ್ನೆಗೆ ಉತ್ತರಿಸಲಾಗದೇ ಅವನು ತಲೆಕೆಳಗೆ ಹಾಕಿದ. ಪಕ್ಕದಲ್ಲಿ ನಿಂತಿದ್ದ ಮರ್ತುಕಿಣಿ "ಚೆನ್ನಾದೇವಿಯ ಬಗ್ಗೆ ಕೇಳಿದ್ದೇನೆ" ಎಂದ.

"ಸಂಗೀತ ಪುರದ ರಾಣಿ. ಅವರು ಈ ರಾಣಿಯ ಹಿರಿಯಕ್ಕ".

"ಹಾಗಿದ್ದರೆ ನಮಗೆ ಹೆದರಿಕೆಯಿಲ್ಲ" ಮಂಡಿಯೂರಿ ನಿಂತಿದ್ದ ಮರ್ತುಕಿಣಿ ಎದ್ದು ನಿಂತ. ಜೊತೆಯಲ್ಲಿದ್ದವರೂ ಎದ್ದು ನಿಂತರು "ಚೆನ್ನಾದೇವಿ ರಾಣಿಯ ಪೋರ್ಚುಗೀಸರ ಮೇಲಿನ ಬದ್ಧ ದ್ವೇಷ ಗೋವೆಯಲ್ಲಿ ಮನೆ ಮನೆಯ ಕಥೆಯಾಗಿದೆ". ಎಂದ ಮರ್ತುಕಿಣಿ.

ರತ್ನಾಕರ ನಾಯಕ ಸಂತುಷ್ಟನಾದ. "ಹಿರಿಯ ರಾಣಿ ಸತ್ತು ಇಪ್ಪತ್ತು ಸಂವತ್ಸರಗಳಾದುವು. ಅರಸೊತ್ತಿಗೆ ಮಾಡಿದ್ದು ಆರೇ ಸಂವತ್ಸರಗಳಾದರೂ ಸಾಳುವ ವಂಶಕ್ಕೆ ಅಪಾರ ಕೀರ್ತಿ ತಂದವರು ಚೆನ್ನಾದೇವಿ. ಅವರ ಕಿರಿಯ ಸೋದರಿ ಚೆನ್ನಭೈರಾದೇವಿ ಹಾಡುವಳ್ಳಿ ಗೇರಸೊಪ್ಪೆ ರಾಜ್ಯಗಳ ಸಾಮ್ರಾಜ್ಞೆ. ಆಶ್ರಿತರನ್ನು ನಾವು ಕೈ ಬಿಡುವವರಲ್ಲ. ಅನುಕೂಲವಾದ ಏನು ಕೆಲಸ ಬೇಕಿದ್ದರೂ ಮಾಡಿ ಕಾಳು ಮೆಣಸಿನ ವ್ಯಾಪಾರ ಇಲ್ಲಿ ದಂಡಿಯಾಗಿದೆ. ಅದಕ್ಕೆ ಕೈ ಹಾಕಿದವರು ಸೋತದ್ದು ಕಾಣೆವು" ಎಂದು ಅವನು ಆ ದಿನಕ್ಕೆ ಬೇಕಾಗುವಷ್ಟು ಅಕ್ಕಿ, ಕಾಯಿ ಎಲ್ಲಾ ಉಗ್ರಾಣದಿಂದ ತೆಗೆದುಕೊಡಲು ಹೇಳಿ ಎದ್ದು ನಿಂತ.

ಚಿಳ್ಳುಡೆಯಲ್ಲಿ ಹೀಗೆ ಅವರ ವಾಸ ಆರಂಭವಾಯಿತು. ರತ್ನಾಕರ ನಾಯಕನಿಂದ ಬೀಳ್ಕೊಟ್ಟು ಗುಂಪು ಸೇರುವ ದಾರಿಯಲ್ಲಿ ವಿಟ್ಠುಪೈ ಮರ್ತುಕಿಣಿಯನ್ನು "ಈ ಚೆನ್ನಾದೇವಿ ರಾಣಿಯ ಬಗ್ಗೆ ಯಾವಾಗ ಕೇಳಿದ್ದು ನೀನು?" ಎಂದು ಪ್ರಶ್ನಿಸಿದ್ದ. "ಕೇಳಿದವರು ಯಾರು ವಿಟ್ಠೂ, ಈಗಿನ ರಾಣಿಯ ಅಷ್ಟು ಉದ್ದದ ಹೆಸರು ನನ್ನ ನಾಲಿಗೆಯ ಮೇಲೆ ಥಟ್ಟನೆ ಹೊರಳಲಿಲ್ಲ. ಅದಕ್ಕೆ ಮೊಟಕು ಮಾಡಿ ಹೇಳಿದೆ. ಅಲ್ಲದೇ ಮಂಡಿ ಬೇರೆ ನೋಯುತ್ತಿತ್ತು. ಎದ್ದು ನಿಲ್ಲಲು ಒಂದು ನೆವಬೇಕಿತ್ತು" ಎಂದು ಮರ್ತುಕಿಣಿ ಜೋರಾಗಿ ನಕ್ಕ.

"ಬದುಕಬೇಕಿದ್ದರೆ ನಾಲಿಗೆಯ ಬಲ ಒಂದು ಸಾಕು. ಇಲ್ಲದಿದ್ದರೆ ನಿನ್ನ ಹೆಗಲ ಮೇಲಿರುವ ಈ ಅಕ್ಕಿಮೂಟೆ, ಈ ತೆಂಗಿನಕಾಯಿಗಳು ಸಿಗುತ್ತಿದ್ದವೇ?" ಎಂದು ಹೇಳಿ ಮತ್ತೂ ನಕ್ಕ. [ಸ್ವಸಾ. ಪುಟ ೧೮೧-೧೮೨]

---

ಅದೇ ಮರ್ತುಕಿಣಿ ಒಮ್ಮೆ ಅರಬರಿಂದ ತಪ್ಪಿಸಿಕೊಂಡು ಬಂದು ಹೇಳುತ್ತಾನೆ. "ನಾಲಿಗೆ ಒಂದು ಗಟ್ಟಿ ಇದ್ದರೆ ಸಾಕು. ಏನಾದರೂ ಮಾಡಿ ತಪ್ಪಿಸಿಕೊಳ್ಳಲು ಬ್ರಾಹ್ಮಣ ಮಕ್ಕಳಿಗೆ ಹೇಳಿಕೊಡಬೇಕೇ?" [ಸ್ವಸಾ. ಪುಟ ೧೯೨]

ಹೀಗೆ ತಮ್ಮ ಮೂಲನೆಲೆಯಿಂದ ವಿವಿಧ ಪ್ರಾಂತ್ಯಗಳಿಗೆ ವಲಸೆ ಹೋದ ಸಾರಸ್ವತರು ತಮ್ಮ ಚಾಣಾಕ್ಷತನದಿಂದ ವಿವಿಧ ವ್ಯಾಪಾರಗಳಲ್ಲಿ ತೊಡಗಿಸಿಕೊಂಡು ತಮ್ಮದೇ ಆದ ಪ್ರತ್ಯೇಕ ಐಡೆಂಟಿಟಿ ಉಳಿಸಿಕೊಂಡಿದ್ದಾರೆ. ತಾವು ನೆಲೆಸಿದ ಸ್ಥಳಗಳಲ್ಲಿ ಬ್ಯಾಂಕುಗಳನ್ನು, ವಿದ್ಯಾಸಂಸ್ಥೆಗಳನ್ನು, ಹೊಟೇಲುಗಳನ್ನು, ಇನ್ನಿತರ ವಾಣಿಜ್ಯ ಸಂಸ್ಥೆಗಳನ್ನು ಸ್ಥಾಪಿಸಿ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

## ಸಾರಸ್ವತ ಮೂಲಸಂಸ್ಕೃತಿಯ ಸಂಪ್ರದಾಯಗಳು

ಕಾದಂಬರಿಯಲ್ಲಿ ಕಥೆಗೆ ಪೂರಕವಾಗುವಂತೆ ಅಲ್ಲಲ್ಲಿ ಸಾರಸ್ವತರು ರೂಢಿಸಿಕೊಂಡು ಬಂದ ಸಂಪ್ರದಾಯಗಳ ಬಗ್ಗೆಯೂ ಕೆಲವು ವಿವರಗಳು ಮೂಡಿಬಂದಿವೆ.

ವಿಟ್ಠುಪೈ ಹುಟ್ಟಿದ ಘಳಿಗೆ ಅಶುಭವಾಗಿದೆಯೆಂದು ರಂಗಶರ್ಮರು ಹೇಳಿದಾಗ ಆ ದೋಷ ಪರಿಹಾರಕ್ಕೆ ಮಾಳಪ್ಪಯ್ಯ ಪೂಜೆ ಮಾಡಿಸುತ್ತಾನೆ.

'ರಂಗಶರ್ಮರು ಮಗು ಹುಟ್ಟಿದ ಘಳಿಗೆ ಚೆನ್ನಾಗಿಲ್ಲವೆಂದರು. ಅದರಿಂದಾಗಿ ಒಂದು ಹೋಮವನ್ನೂ ಬ್ರಾಹ್ಮಣ ಸಂತರ್ಪಣೆಯನ್ನೂ ಮಾಡುವುದು ಅನಿವಾರ್ಯವಾಯಿತು. ಮಗುವನ್ನು ಸಗೋತ್ರಿಯಲ್ಲದವನಿಗೆ ಒಂದು ಹಸುವಿನ ಕೆಳಗಿನಿಂದ ಕೊಡಬೇಕೆಂದೂ, ತಂದೆಯು ಮಗುವಿನ ಮುಖವನ್ನು ಮೊಟ್ಟ ಮೊದಲ ಬಾರಿಗೆ ನೇರವಾಗಿ ನೋಡಬಾರದೆಂದೂ ರಂಗಶರ್ಮರು ಅಪ್ಪಣೆ ಕೊಡಿಸಿದರು. ಹನ್ನೊಂದನೆಯ ದಿನ ಬೆಳಗ್ಗೆ ಹೋಮ ಹವನಗಳು ನಡೆದುವು. ಹನ್ನೆರಡು ಮಂದಿ ನೀಚ ಜಾತಿಯವರಿಗೆ ಊಟವಿಕ್ಕಿದರು. ಒಂದು ಶುಭ ಮುಹೂರ್ತದಲ್ಲಿ ಹಸುವಿನ ಹೊಟ್ಟೆಯ ಕೆಳಗಿನಿಂದ ಮಗುವನ್ನು ಇಟ್ಟಿಗೆ ಮಾಡುವ ನೀಚ ಜಾತಿಯವನಿಗೆ ದಾನ ಮಾಡಿದರು. ಅವನೂ ಅವನ ಹೆಂಡತಿಯೂ ಮಗುವನ್ನು ಎದೆಗೆ ಅವಚಿ, ನೆತ್ತಿಯನ್ನು ಮೂಸಿದರು. ಆಕೆ ಮೊಲೆ ಹಾಲು ಕುಡಿಸಿದಳು. ಕುಡಿ ಬಾಳೆಯ ಎಲೆಯ ಮೇಲಿಟ್ಟ ಅಕ್ಕಿಯ ರಾಶಿಯ ಮೇಲೆ ಆ ಮಗುವನ್ನಿಟ್ಟು ಅವರು ಹಿಂದೆ ಕೊಟ್ಟರು. ಆಮೇಲೆ ಮಗುವನ್ನು ಒಳಗೆ ಕೊಂಡೊಯ್ಯಲಾಯಿತು. ಅಕ್ಕಿ, ಬಾಳೆ ಎಲೆ, ವೀಳ್ಯದೆಲೆ, ಅಡಕೆಯ ಹೋಳು, ತೆಂಗಿನಕಾಯಿ, ಅರಿವೆಯನ್ನು ಆ ಇಟ್ಟಿಗೆ ಕೂಯ್ಯುವವನಿಗೇ ಕೊಟ್ಟು ರಂಗಶರ್ಮರು ಹಸುವನ್ನು ತಮ್ಮ ಮನೆಗೆ ಹೊಡೆದರು. ವಸ್ತ್ರವೊಂದನ್ನು ಅಡ್ಡ ಹಿಡಿದು ಬೆಳ್ಳಿಯ ತಟ್ಟೆಯಲ್ಲಿ ತುಪ್ಪ ಹಾಕಿ ಮಗುವನ್ನು ಅದರ ಬಳಿ ಬಗ್ಗಿಸಿ ಮಾಳಪ್ಪಯ್ಯನವರಿಗೆ

ಪ್ರತಿಬಿಂಬ ತೋರಿಸಲಾಯಿತು. ಮಗುವಿಗೆ ಪಂಡರಾಪುರದ ವಿಠೋಬನ ನೆನಪಿಗಾಗಿ ವಿಟ್ಠು ಪೈ ಎಂದು ನಾಮಕರಣ ಮಾಡಿದರು' [ಸ್ವಸಾ. ಪುಟ ೧೫-೧೬].

## ವಿಟ್ಠುಪೈಯ ಉಪನಯನ

'ವಿಟ್ಠುಪೈಗೆ ಶಾಸ್ತ್ರೋಕ್ತವಾಗಿ ಉಪನಯನ ನಡೆಯಿತು. ಮುಹೂರ್ತಕ್ಕೆ ಎರಡು ಘಂಟೆಗಳಿರುವಾಗ ಮಂಗಳವಾದ್ಯಗಳು ಮೊಳಗಿದುವು. ಮಾಳಪ್ಪಯ್ಯನವರು ಕುಣಿತದ ಹೆಣ್ಣುಗಳನ್ನು ಕರೆಸಿ ಕುಣಿಸಿದರು. ಕೆಲವೇ ಹೊತ್ತಿನಲ್ಲಿ ಚಪ್ಪರ ಅತಿಥಿಗಳಿಂದ ತುಂಬಿ ಹೋಯಿತು. ವಿಟ್ಠುಪೈಯನ್ನು ಪರಿಮಳ ದ್ರವ್ಯಗಳಿಂದ ಮೈ ಪೂಸಿ ಸ್ನಾನ ಮಾಡಿಸಿದರು. ಅಡುಗೆಯ ಕೋಣೆಗೆ ಎತ್ತಿಕೊಂಡೊಯ್ದು ರಾಧಾಬಾಯಿ ತನ್ನ ತೊಡೆಯ ಮೇಲೆ ಕುಳ್ಳಿರಿಸಿ, ಅನ್ನ ತರಕಾರಿ ಪಲ್ಯ ಮತ್ತು ಸಿಹಿತಿಂಡಿಗಳನ್ನು ತಿನ್ನಿಸಿದಳು. ಕ್ರಿಷ್ಣಶರ್ಮರು ಅಲ್ಲಿಗೆ ಬಂದು "ಬೇರೆಯವರು ಮಾಡಿದ ಅಡುಗೆಯನ್ನು ನೀನು ತಿನ್ನುವುದು ಇದೇ ಕೊನೆಯ ಬಾರಿ. ಇನ್ನು ಮುಂದೆ ನಿನ್ನ ಹೊಟ್ಟೆಗೆ ಬೇಕಾದುದನ್ನು ನೀನೇ ತಯಾರಿಸಿ ತಿನ್ನಬೇಕು" ಎಂದು ಮಂತ್ರ ಹೇಳಿದರು. ವಿಟ್ಠುಪೈಯ ಎಲ್ಲ ಅರಿವೆಯನ್ನು ತೆಗೆದು ನಗ್ನವಾಗಿಸಿ ಅವನ ಸೋದರಮಾವ ಹೊರಗೆ ಎತ್ತಿಕೊಂಡು ಹೋದರು. ಮಾಳಪ್ಪಯ್ಯನವರು ಹತ್ತಿರ ಕುಳ್ಳಿರಿಸಿ ಹರಿತವಾದ ಕತ್ತಿಯಿಂದ ಅವನ ಕೇಶಮುಂಡನ ಮಾಡಿಸಿ, ಜುಟ್ಟು ಬಿಡಲು ಒಂದಷ್ಟು ಕೂದಲು ಉಳಿಸಿದರು. ತೆಗೆದ ಕೂದಲನ್ನು ದರ್ಭೆ, ಶಮೀವೃಕ್ಷದ ಎಲೆಗಳು, ಅಕ್ಕಿ ಗೋಧಿ ನವಧಾನ್ಯಗಳ ಜೊತೆ ಹೋಮಕುಂಡದ ಬಳಿ ಸೆಗಣಿಯ ಮೇಲಿಡಲು ಹೆಂಡತಿಗೆ ಹೇಳಿದರು. ವಿಟ್ಠುಪೈಗೆ ಮತ್ತೊಮ್ಮೆ ಸ್ನಾನಮಾಡಿಸಿ ಹೋಮಕುಂಡದ ಬಳಿ ಪೂರ್ವಕ್ಕೆ ಮುಖ ಮಾಡಿ ಕುಳ್ಳಿರಿಸಿದರು. ಮಾಳಪ್ಪಯ್ಯ ಅವನ ಬಲಪಕ್ಕದಲ್ಲೂ ಕ್ರಿಷ್ಣಶರ್ಮರು ಎಡಪಕ್ಕದಲ್ಲೂ ಕುಳಿತರು. ಗೃಹಶಾಂತಿಯ ಹೋಮ ನಡೆಯಿತು. ಅದಾಗುತ್ತಲೂ ಉಪನಯನ ಹೋಮ ಮಾಡಿ ಐದು ಬಗೆಯ ಕಾಷ್ಟಗಳನ್ನೂ ತುಪ್ಪವನ್ನೂ ಸುರಿದ ವಿಟ್ಠುಪೈ.

ಯಜ್ಞವಾದ ಮೇಲೆ ವಿಟ್ಠುಪೈ ಮಾಳಪ್ಪಯ್ಯನವರ ಕಾಲಿಗೆ ಬಿದ್ದು ಬ್ರಾಹ್ಮಣನ ಕರ್ತವ್ಯಗಳನ್ನು ಹೇಳಿಕೊಡಿರೆಂದು ಬೇಡಿದ. ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿ ಬಿಳಿಯ ಅರಿವೆಯ ಮುಸುಗು ಹಾಕಿ ಮಾಳಪ್ಪಯ್ಯ ಗಾಯತ್ರಿ ಉಪದೇಶ ಮಾಡಿದರು. ಕ್ರಿಷ್ಣಶರ್ಮರು ಅವನನ್ನು ದರ್ಭೆಯ ಮೇಲೆ ಕುಳ್ಳಿರಿಸಿ ಸೊಂಟಕ್ಕೆ ದರ್ಭೆಯ ಬಳ್ಳಿ ಸುತ್ತಿ ಕೌಪೀನವುಡಿಸಿದರು. ಪಾಲಾಶದ ದಂಡವೊಂದಕ್ಕೆ ಜನಿವಾರ ತೊಡಿಸಿ ಮಾಳಪ್ಪಯ್ಯನವರ ಮೂಲಕ ಅವನ ಕೈಗೆ ಕೊಟ್ಟು ನೀನೀಗ ದ್ವಿಜನಾಗಿದ್ದೀಯ; ಇನ್ನು ಮುಂದೆ ಭಿಕ್ಷೆ ಪಡೆದು ನಿನ್ನ ಹೊಟ್ಟೆ ತುಂಬಿಸಿಕೊಳ್ಳತಕ್ಕದ್ದು ಎಂದರು. ವಿಟ್ಠುಪೈ ಬಲಗೈಯಲ್ಲಿ ಒಂದು ಪಾತ್ರೆಯನ್ನೂ ಎಡಗೈಯಲ್ಲಿ ಪಾಲಾಶದಂಡವನ್ನು ಹಿಡಿದು ಮೊದಲು ತಾಯಿಯ ಬಳಿಯೂ ಆಮೇಲೆ ಬಂದುಬಾಂಧವರೊಡನೆಯೂ ಭವತಿ ಭಿಕ್ಷಾಂದೇಹಿ; ಭವಾನ್ ಭಿಕ್ಷಾಂದಧಾತು ಎಂದು ಭಿಕ್ಷೆ ಕೇಳಿದ್ದು ಸಂಜೆಯ ಹೊತ್ತಿಗೆ

'ಮುಕ್ತನ' ಹೋಮ ಮಾಡಿದ. ಮೂರು ದಿನಗಳ ಪರ್ಯಂತ ವಿಟ್ಟುಪೈ ಭಿಕ್ಷೆ ಕೇಳುವ ಕಾಯಕ ಮಾಡಿದ. ನಾಲ್ಕನೆಯ ದಿನ ಸ್ನಾನ ಹೋಮ ಮಾಡಿ ಮುಗಿಸಿ ಸೊಂಟಕ್ಕೆ ಹೊಸ ಪಂಚೆತೊಟ್ಟು ಪಾಲಾಶದಂಡವನ್ನು ಹಿಡಿದು ಕಾಶಿಯ ದಾರಿ ಹಿಡಿದ, ಪಲ್ಲಾ ನದಿಯ ಬಳಿ ಅವನ ಸೋದರಮಾವ ಅವನನ್ನು ಭೇಟಿ ಮಾಡಿ ತನ್ನ ಮಗಳನ್ನು ನಿನಗೇ ಮದುವೆ ಮಾಡಿಕೊಡುತ್ತೇನೆ, ಗೃಹಸ್ಥನಾಗಿ ಸಂಸಾರ ನಡೆಸು ಎಂದು ಮಾತು ಕೊಟ್ಟು ಹಿಂದಕ್ಕೆ ಕರೆದು ತಂದ. ಬಂದವರೆಲ್ಲ ನಾಲ್ಕಾರು ದಿನಗಳ ಔತಣ ದೂಟವನ್ನುಂಡು, ವಟುವನ್ನು ಆಶೀರ್ವದಿಸಿ ಯಥಾನುಶಕ್ತಿ ಉಡುಗೊರೆಗಳನ್ನು ಕೊಟ್ಟು ಹಿಂತೆರಳಿದರು. [ಸ್ವಸಾ. ಪುಟ ೫೭-೫೮]

ನಂತರ ನಡೆಯುವ ಮದುವೆಗಳೇ ಮಾತ್ರವಲ್ಲದೆ ಶವಸಂಸ್ಕಾರಗಳೂ ಸಹ ಪೋರ್ಚುಗೀಸರ ಭಯದ ಸಲುವಾಗಿ ಗುಟ್ಟಾಗಿ ನಡೆಯುತ್ತಿದ್ದರಿಂದ ಯಾವುದೇ ಸಂಪ್ರದಾಯದ ವಿವರಗಳು ಮೂಡಿಬಂದಿಲ್ಲ.

## ಕನ್ನಡ ಸಂಸ್ಕೃತಿಯ ಸಂಪ್ರದಾಯಗಳು

ಕಾದಂಬರಿಯ ಉತ್ತರಾರ್ಧದಲ್ಲಿ ಕಥೆ ಕೌಟುಂಬಿಕ ನೆಲೆಯಲ್ಲಿ ಮೂಡಿಬರುತ್ತದೆ. ರಾಮಚಂದ್ರ ಪೈಯ ಕನ್ನಡ ನಾಡಿನಲ್ಲಿ ನೆಲೆಯೂರಿದ್ದರಿಂದ ಅಲ್ಲಿ ಕನ್ನಡ ಸಂಸ್ಕೃತಿಯ ಕೆಲವು ಸಂಪ್ರದಾಯಗಳ ಬಗ್ಗೆ ಉಲ್ಲೇಖಗಳಿವೆ.

ರಾಮಚಂದ್ರ ಪೈ ಕನ್ನಡ ಜಿಲ್ಲೆಯ ಸಂಪ್ರದಾಯದಂತೆ ಯಾವುದೇ ಶುಭ ಕಾರ್ಯವಾಗಲಿ, ತಪ್ಪೊಪ್ಪಿಗೆಯಾಗಲಿ ಧರ್ಮಸ್ಥಳದ ಮಂಜುನಾಥಸ್ವಾಮಿಗೆ ಪೂಜೆ ಮಾಡಿಸಿ, ಧರ್ಮಾಧಿಕಾರಿ ಹೆಗ್ಗಡೆಯವರ ಆಶೀರ್ವಾದ ಪಡೆದು ನಡೆಸುವ ರೂಢಿಮಾಡಿಕೊಳ್ಳುತ್ತಾನೆ. ಮಣಿಯಾಣಿ ಹತ್ತಿರ ಬಳ್ಳಂಬೆಟ್ಟುವಿನ ಭೂಮಿಯನ್ನು ಖರೀದಿಸಿದಾಗ ರಾಮಚಂದ್ರಪೈ ಈ ಸಂಪ್ರದಾಯವನ್ನು ತನ್ನದಾಗಿಸಿಕೊಳ್ಳುತ್ತಾನೆ.

'ರಾಮಚಂದ್ರ ಪೈ ಮಣಿಯಾಣಿಯೊಡನೆ ಧರ್ಮಸ್ಥಳಕ್ಕೆ ಬಂದ ಕೆಲಸ ಹೆಗ್ಗಡೆಯವರ ಸಮ್ಮುಖದಲ್ಲಿಯೇ ಸುಸೂತ್ರವಾಗಿ ನಡೆಯಿತು. ಅಗಲವಾದ ತಟ್ಟೆಯಲ್ಲಿ ತಾಂಬೂಲದೊಡನೆ ಇಟ್ಟ ಹೊನ್ನಿನ ವರಹಗಳನ್ನು ಅವರು ಒಮ್ಮೆ ಮುಟ್ಟಿ ಮಣಿಯಾಣಿಯ ಕೈಗೊಪ್ಪಿಸಿದರು. ಮಣಿಯಾಣಿ ಭಕ್ತಿಯಿಂದ ಎದ್ದುನಿಂತು ಅದನ್ನು ಸ್ವೀಕರಿಸಿ 'ಇಲ್ಲಿಯ ತನಕ ನಾನು, ನನ್ನ ಹಿರಿಯರು ಅನುಭವಿಸಿಕೊಂಡು ಬಂದ ಈ ಬಳ್ಳಂಬೀಡಿನ ಆಸ್ತಿಯಲ್ಲಿ ನನಗೆ ಸೇರಿದ್ದ ಆಸ್ತಿ ಬಾಗಾಯಿತು. ವಗೈರೆ ಮನೆ ಹಟ್ಟಿ ಕೊಟ್ಟಿಗೆ ನೀರಿನ ದಾರಿಯ ಹಕ್ಕು ಮುಂತಾದಿ ಸರ್ವ ಹಕ್ಕನ್ನು ಈಗಿನಿಂದಲೇ ಇವರಿಗೆ ಅನುಭವಿಸುವಂತೆ ಕೊಡುತ್ತಿದ್ದೇನೆ. ಅವರು ಅವರ ಹೆಸರಿನಿಂದ ಕುಡ್ತಲೆ ಹಾಕಿಸಿ, ರಾಜರಾಗಲೀ ಆಳುವವರಾಗಲಿ ಹಾಕಿದ ತೀರ್ವೆಕಂದಾಯ ತೆತ್ತು, ಅವರ ಸಂತಾನ ಪಾರಂಪರ್ಯವಾಗಿ ಕಷ್ಟಕೃತ ಮಾಡಿ, ಇಷ್ಟಾನುಸಾರ, ಅಷ್ಟ ಭೋಗಾದಿ ಸಮೇತ ಸದರಿ

ಆಸ್ತಿ, ಅದರಲ್ಲಿರುವ, ಹುಟ್ಟುವ ಎಲ್ಲವನ್ನೂ ಗೃಹೋಪಸ್ಕಾರವಾಗಿ ಬಳಸಬಹುದು ಅಂತ ಒಪ್ಪಿಗೆ ಕೊಡುತ್ತೇನೆ, ಹಾಗೆ ಅವರು ಅನುಭವಿಸುತ್ತಿರುವಾಗ ನಾನಾಗಲೀ, ನನ್ನ ಮಕ್ಕಳಾಗಲೀ ಅಭಿಪ್ರಾಯ ಭೇದ ಮಾಡಿದ್ದೇ ಆದರೆ ಮುಕ್ತಿ ದೊರೆಯದೆ ಹೋಗಲಿ. ಇದಕ್ಕೆ ಇಲ್ಲಿಯ ಶ್ರೀ ದೇವರು ಮಂಜುನಾಥಸ್ವಾಮಿ ಮತ್ತು ಕಾಳಹಸ್ತಿ ಕಾಳರ್ಕಾಯಿ, ಅಣ್ಣಪ್ಪ ಮೊದಲಾದ ದೈವಗಳೂ, ದರ್ಶನ ಸ್ವರೂಪರಾದ ಶ್ರೀ ಹೆಗ್ಗಡೆಯವರೂ ಸಾಕ್ಷಿ ಸಾಕ್ಷಿ ಸಾಕ್ಷಿ' ಎಂದು ಹೇಳಿ ಹೆಗ್ಗಡೆಯವರ ಕಾಲಿಗೆರಗಿದ. [ಸ್ವಸಾ. ಪುಟ ೩೨೨]

ಹೀಗೆ ಮಣಿಯಾಣಿಯಿಂದ ಧರ್ಮಸ್ಥಳದ ದೇವರ ಆಶೀರ್ವಾದ ಪಡೆಯುವ ಸಂಪ್ರದಾಯವನ್ನು ರೂಢಿಸಿಕೊಂಡ ರಾಮಚಂದ್ರ ಪೈ ಮುಂದೆ ಪ್ರತಿಯೊಂದು ಕಾರ್ಯದಲ್ಲೂ ಈ ಸಂಪ್ರದಾಯವನ್ನು ಪಾಲಿಸುತ್ತಾನೆ. ಹಾಗೆಯೇ ನಾಗಪೂಜೆ ಮಾಡುವುದನ್ನು ಸಹ ತನ್ನ ಸಂಪ್ರದಾಯಗಳಲ್ಲೊಂದಾಗಿಸುತ್ತಾನೆ.

ಹೀಗೆಯೇ ತಿಮ್ಮಪ್ಪೈ ವಿಷ್ಣುಮೂರ್ತಿಯ ತಂಬಿಲಕ್ಕೆ ಹೋಗಿ ಪ್ರಶ್ನೆ ಕೇಳುವುದು [ಸ್ವಸಾ. ಪುಟ ೩೬೭], ರಾಮಚಂದ್ರ ಪೈ ನಾಗಬಿಂಬವನ್ನು ಕಂಡುಹಿಡಿಯಲು ಗೋವಿಂದ ಭಟ್ಟರಿಂದ ಅಂಜನ ಹಾಕಿಸುವುದು [ಸ್ವಸಾ. ಪುಟ ೯೫೪] ಭುಜಂಗ ಪೈ ನಾರಾಯಣ ಬಲ್ಯಾಯರಿಂದ ಭೂತ ಪೂಜೆ ಮಾಡಿಸುವುದು [ಸ್ವಸಾ. ಪುಟ ೪೧೮] ಹೀಗೆ ಕೆಲವು ನಂಬಿಕೆಗಳ ಉಲ್ಲೇಖಗಳನ್ನೂ ಕಾದಂಬರಿಯಲ್ಲಿ ಕಾಣಬಹುದು.

ಒಟ್ಟಾರೆ ಸಾರಸ್ವತರು ತಮ್ಮ ಮೂಲ ಸಂಸ್ಕೃತಿಯ ಜೊತೆಗೆ ಕನ್ನಡ ಸಂಸ್ಕೃತಿಯನ್ನು ಸಹ ರೂಢಿಸಿಕೊಂಡು ಸ್ಥಳೀಯರ ಜೊತೆ ಸೌಹಾರ್ದತೆಯಿಂದ ಜೀವನ ನಡೆಸಿದರು.

## ಸಂದರ್ಶನ

* ಡಾ. ಗೀತಾ ಶೆಣೈ–ಬಿ.ಎಸ್ಸಿ. ಎಂ.ಎ., ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾಲಯದ ಆಂತರಿಕ ವಿದ್ಯಾರ್ಥಿಯಾಗಿ ಡಾ.ಹೆಚ್.ಎಸ್. ಶ್ರೀಮತಿಯವರ ಮಾರ್ಗದರ್ಶನದಲ್ಲಿ ಪಿ.ಎಚ್.ಡಿ. ಮಾಡಿರುವ ಇವರು ಮೂಲತಃ ಗೋವೆಯ ಸಾರಸ್ವತರಾಗಿರುತ್ತಾರೆ. ಇವರು ಸಾರಸ್ವತರ ಬಗ್ಗೆ ತಿಳಿಸಿರುವ ಕೆಲವು ವಿಚಾರಗಳನ್ನು ಇಲ್ಲಿ ಉಲ್ಲೇಖಿಸಲು ಇಚ್ಛಿಸುತ್ತೇನೆ.

ಸಾರಸ್ವತರು ಗಂಡು–ಹೆಣ್ಣು ಎಂಬ ತಾರತಮ್ಯ ಮಾಡದೆ ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ನೀಡಿದ್ದಾರೆ. ಹಾಗಾಗಿ ಹೆಣ್ಣು ಮಕ್ಕಳು ಉನ್ನತ ಹುದ್ದೆಗಳಲ್ಲಿದ್ದು ಆರ್ಥಿಕವಾಗಿ ಸಬಲರಾಗಿದ್ದಾರೆ ಹಾಗು ವಿವಿಧ ಕ್ಷೇತ್ರಗಳಲ್ಲಿ ತಮ್ಮ ಛಾಪು ಮೂಡಿಸಿದ್ದಾರೆ. ಸಂಪ್ರದಾಯಸ್ಥ ಬ್ರಾಹ್ಮಣರಾಗಿದ್ದರೂ ವಿಧವಾ ವಿವಾಹವನ್ನು ಪ್ರೋತ್ಸಾಹಿಸಿದ್ದಾರೆ. ಅಸ್ಪೃಶ್ಯತೆಯನ್ನು ತೊಲಗಿಸಲು ಶ್ರಮಿಸಿದ್ದಾರೆ. ಎಷ್ಟು ವಿದ್ಯಾವಂತರಾಗಿದ್ದರೂ ದೈವಭಕ್ತರಾಗಿರುವ ಇವರು ವರ್ಷಕ್ಕೊಮ್ಮೆಯಾದರೂ ಗೋವೆಗೆ ಹೋಗಿ ತಮ್ಮ

---

* ಕನ್ನಡದ ಜನಪ್ರಿಯ ಲೇಖಕಿಯರಲ್ಲೊಬ್ಬರಾದ ಡಾ. ಗೀತಾಶೆಣೈ ಝುಂಪಲಹರಿಯ ಪುಲಿಟ್ಜನರ್ ಪ್ರಶಸ್ತಿ ಪಡೆದಿರುವ Interpreter of Maladies ಕೃತಿ 'ಬೇನೆಗಳ ದುಭಾಷಿ' ಯೆಂದು ಭಾಷಾಂತರಿಸಿದ್ದಾರೆ. ೨೫ ಕೃತಿಗಳನ್ನು ರಚಿಸಿರುವ ಇವರು 'ಮಹಿಳಾ ಅಧ್ಯಯನ'ದಲ್ಲಿ C.W.E.D. ಸ್ಪೆಷಲೈಜೇಸನ್ ಮಾಡಿದ್ದಾರೆ.

ಕುಲದೇವತೆಗೆ ಹಾಗೂ ಮನೆತನದ ದೇವರಿಗೆ ಪೂಜೆ ಸಲ್ಲಿಸಿ ಬರುತ್ತಾರೆ. ಸಾರಸ್ವತರ ಧರ್ಮರಕ್ಷಣೆಗೆ ಪ್ರಾಣತ್ಯಾಗ ಮಾಡಿದ ಧಡ್ಡನಿಗಾಗಿ ಕಟ್ಟಿಸಿರುವ ದೇವಸ್ಥಾನಗಳಿಗೂ ಹೋಗುವುದಲ್ಲದೆ ಮದುವೆಗಳಲ್ಲಿ ಮದುಮಗನ ಕಡೆಯ ಒಬ್ಬ ಚಿಕ್ಕ ಹುಡುಗನನ್ನು ಹಾಗು ಮದುಮಗಳ ಕಡೆಯ ಒಬ್ಬ ಚಿಕ್ಕ ಹುಡುಗಿಯನ್ನು ಧಡ್ಡ ಧಡ್ಡಿಯೆಂದು ಕೂರಿಸುತ್ತಾರೆ. ಕನ್ನಡದ ಸಂಸ್ಕೃತಿಯಲ್ಲಿ ಹೆಣ್ಣುಮಕ್ಕಳು ತಮ್ಮ ಸೋದರ ಮಾವನೊಡನೆ ಮದುವೆಯಾಗಬಹುದಾದ ಸಂಪ್ರದಾಯವಿದೆ. ಆದರೆ ಸಾರಸ್ವತರು ಸೋದರಮಾವನನ್ನು ತಂದೆಯ ಸಮಾನರಾಗಿ ಕಾಣುವುದರಿಂದ ಆತನನ್ನು ಮದುವೆಯಾಗುವಂತಿಲ್ಲ. ಆದರೆ ಸೋದರಮಾವನ ಮಗನನ್ನು ಮದುವೆಯಾಗಬಹುದಾಗಿದೆ.

ಕೊಂಕಣಿ ಭಾಷೆಗೆ ಆದ್ಯತೆ ನೀಡುವ ಸಾರಸ್ವತರು ಪರಸ್ಪರ ಭೇಟಿಯಾದಾಗ ಕೊಂಕಣಿ ಭಾಷೆಯಲ್ಲೇ ಮಾತನಾಡುತ್ತಾರೆ. ಹಿರಿಯರೇ ಇರಲಿ ಕಿರಿಯರೇ ಇರಲಿ ಪುರುಷರಿಗೆ 'ಮಾಮ್' ಎಂದು ಸ್ತ್ರೀಯರಿಗೆ 'ಮಾಂಯಿ' ಎಂದು ಸಂಭೋದಿಸುತ್ತಾರೆ. ಸ್ಥಳೀಯ ಸಂಸ್ಕೃತಿಯನ್ನು ಕೂಡ ರೂಢಿಸಿಕೊಂಡು ಎಲ್ಲರಲ್ಲೊಂದಾಗಿ ಬೆರೆತು ಸೌಹಾರ್ದತೆಯಿಂದಿದ್ದರೂ ತಮ್ಮದೇ ಆದ ಪ್ರತ್ಯೇಕ 'ಐಡೆಂಟಿಟಿ'ಯನ್ನು ಉಳಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಹಬ್ಬ ಹರಿದಿನಗಳನ್ನು ಮನೆಯಲ್ಲಿ ಮಾತ್ರ ಆಚರಿಸದೆ ಸಮುದಾಯದವರೆಲ್ಲಾ ಒಂದೆಡೆ ಸೇರಿ ಆಚರಿಸುತ್ತಾರೆ ಹಾಗಾಗಿ ಪರಸ್ಪರ ಸಂಪರ್ಕದಲ್ಲಿರುತ್ತಾರೆ. ತಾವು ನೆಲೆಸಿರುವ ಪ್ರಾಂತ್ಯಗಳಲ್ಲಿ ವಿವಿಧ ಉದ್ದಿಮೆಗಳನ್ನು ಪ್ರಾರಂಭಿಸಿ ಆರ್ಥಿಕವಾಗಿ ಸಾಮಾಜಿಕವಾಗಿ ಪರಸ್ಪರ ಸಹಕರಿಸಿ ತಮ್ಮ ಕೊಡುಗೆ ನೀಡಿದ್ದಾರೆ.



## ಅಧ್ಯಾಯ – ೫

# ಪಾತ್ರಗಳ ನಿರ್ವಹಣೆ

ಯಾವುದೇ ಒಂದು ಕಥೆಯನ್ನು ನೇರವಾಗಿ ಹೇಳದೆ ಅದಕ್ಕೆ ತಕ್ಕನಾದ ಸೂಕ್ತ ಪಾತ್ರಗಳನ್ನು ಸೃಷ್ಟಿಸಿ ಅವುಗಳ ಮೂಲಕ ಕಥೆಯನ್ನು ಓದುಗರ ಮುಂದೆ ಬಿಚ್ಚಿಡುತ್ತಾ ಹೋಗುವುದೇ ಒಂದು ಉತ್ತಮ ಕಾದಂಬರಿಯ ಮುಖ್ಯಲಕ್ಷಣಗಳಲ್ಲೊಂದಾಗಿರುತ್ತದೆ. ಪಾತ್ರಗಳು ಕಥೆಯ ಜೀವಾಳವಾಗಿರುತ್ತವೆ. ಕೆಲವು ಪಾತ್ರಗಳಂತೂ ಓದುಗರ ಮನದಲ್ಲಿ ಅಚ್ಚಳಿಯದೆ ಉಳಿದು ಬಿಡುತ್ತವೆ.

ಗೋಪಾಲಕೃಷ್ಣ ಪೈಯವರ 'ಸ್ವಪ್ನ ಸಾರಸ್ವತ' ಒಂದು ಬೃಹತ್ ಕಾದಂಬರಿಯಾಗಿದ್ದು ಸುಮಾರು ನೂರೈವತ್ತು ಪಾತ್ರಗಳನ್ನು ಒಳಗೊಂಡಿದೆ. ಅವುಗಳಲ್ಲಿ ವಿಟ್ಠು ಪೈ, ರಾಮಚಂದ್ರ ಪೈ ಹಾಗು ನಾಗ್ಡೊ ಬೇತಾಳನ ಪಾತ್ರಗಳು ಪ್ರಧಾನ ಪಾತ್ರಗಳಾಗಿವೆ. ಮತ್ತೇ ಕೆಲವು ಪೋಷಕ ಪಾತ್ರಗಳನ್ನು ಬಿಟ್ಟರೆ ಉಳಿದ ಪಾತ್ರಗಳೆಲ್ಲ ತಮ್ಮ ಇರುವಿಕೆಯಿಂದ ಕಥೆಯ ಬೆಳವಣಿಗೆಗೆ ಪೂರಕವಾಗಿ ಮೂಡಿಬಂದಿವೆ. ಅಸಂಖ್ಯಾತ ಪಾತ್ರಗಳಿದ್ದರೂ ಯಾವ ಪಾತ್ರವೂ ಕಥೆಯ ಮೇಲಾಗಲಿ, ಇತರ ಪಾತ್ರಗಳ ಮೇಲಾಗಲಿ ಯಾವುದೇ ರೀತಿಯಿಂದ ಹಾವಿಯಾಗದೆ, ಯಾವುದೇ ಗೊಂದಲ ಸೃಷ್ಟಿಸದೆ ಕಥೆ ಸುಲಭವಾಗಿ ಓದಿಸಿಕೊಂಡು ಹೋಗುವಂತೆ ಚಿತ್ರಿತವಾಗಿರುವುದು ಲೇಖಕರ ನೈಪುಣ್ಯತೆಗೆ ನಿದರ್ಶನವಾಗಿದೆ.

'ಸ್ವಪ್ನ ಸಾರಸ್ವತ'ದ ಪಾತ್ರಗಳ ಚಿತ್ರಣ ಹಾಗೂ ನಿರ್ವಹಣೆಯತ್ತ ಗಮನಹರಿಸಿದಾಗ ಕಥೆಯ ನಿರೂಪಣೆಗೆ ಅವಶ್ಯಕವಾಗಿರುವ ಪಾತ್ರಗಳು ಒಂದಕ್ಕೊಂದು ಸಂವಾದಿಯಾಗಿ [Parallel] ಮೂಡಿ ಬಂದಿರುವುದನ್ನು ಗುರುತಿಸಬಹುದಾಗಿದೆ. ಈ ಅಂಶ ಕಾದಂಬರಿಯ ವೈಶಿಷ್ಟ್ಯವಾಗಿದೆ.

ವಿಟ್ಠು ಪೈ – ರಾಮಚಂದ್ರ ಪೈ
ನಾಗ್ಡೊ ಬೇತಾಳ – ಸಾವಿಯರ
ಧಡ್ಡ – ವರ್ತುಕಿಣಿ
ತಿಮ್ಮಪೈ – ಭುಜಂಗ ಪೈ

ಜಾಹ್ನವಿ – ಕಾವೇರಮ್ಮ
ಕೊಮಿನೋ – ಅಲ್ವೀರಾ

ಈ ಮೇಲಿನ ಪಾತ್ರಗಳಲ್ಲಿ ಕೆಲವು ಪಾತ್ರಗಳಂತೂ ಒಟ್ಟಾಗಿ ಕಾಣಿಸಿಕೊಳ್ಳದಿದ್ದರೂ ಅವುಗಳಲ್ಲಿ ಕೆಲವು ಸಾಮ್ಯತೆಗಳು ಇದ್ದು ಆಯಾ ಹಂತದಲ್ಲಿ ಕಥೆಯ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆ ನೀಡಿ, ಪ್ರಾಮುಖ್ಯತೆಯನ್ನು ಪಡೆದಿವೆ. ಈ ಅಧ್ಯಾಯದಲ್ಲಿ ಪಾತ್ರಗಳ ಪರಿಚಯದ ಜೊತೆಗೆ ಮೇಲೆ ತಿಳಿಸಿರುವ ಅಂಶವನ್ನೂ ಸಹ ಚರ್ಚಿಸಲಾಗುತ್ತದೆ.

## ವಿಟ್ಠು ಪೈ

ವಿಟ್ಠು ಪೈ ತನ್ನ ಮೊಮ್ಮಗನಾದ ರಾಮಚಂದ್ರ ಪೈನಿಗೆ ತನ್ನ ವಂಶಗಾಥೆಯನ್ನು ಹೇಳುವುದರ ಮೂಲಕ ಕಥೆ ಪ್ರಾರಂಭವಾಗುತ್ತದೆ. ವೆರಣೆಯ ವ್ಯಾಪಾರಿ ಹಾಗೂ ಹಿರಿಯನಾದ ನರಸಪ್ಪಯ್ಯನ ಮೊಮ್ಮಗನಾಗಿ ಮಾಳಪ್ಪಯ್ಯನ ಮಗನಾಗಿರುವ ವಿಟ್ಠುಪೈ ಕಥೆಯ ಪೂರ್ವಾರ್ಧದ ಪ್ರಮುಖ ಪಾತ್ರನಾಗಿದ್ದಾನೆ.

ಮಾಳಪ್ಪಯ್ಯನಿಗೆ ಹುಟ್ಟಿದ ಮಕ್ಕಳೆಲ್ಲಾ ಒಂದಾನೊಂದು ಕಾರಣದಿಂದ ತೀರಿಹೋಗುತ್ತಿದ್ದ ಸಮಯದಲ್ಲಿ ಹುಟ್ಟಿದ ಮಗುವಿಗೆ ಪಂಡರಾಪುರದ ವಿಠೋಬನ ಕೃಪೆಯಿರಲಿ ಎಂದು ವಿಟ್ಠುಪೈ ಎಂದು ನಾಮಕರಣ ಮಾಡಲಾಗುತ್ತದೆ ಮುಂದೆ ನಡೆಯುವ ಘಟನೆಗಳಿಗೆ ಮುನ್ಸೂಚನೆಯೋ ಎಂಬಂತೆ ವಿಟ್ಠುಪೈ ಹುಟ್ಟಿದ ಘಳಿಗೆಯೇ ಸರಿಯಾಗಿಲ್ಲವೆಂದು ಆ ದೋಷ ನಿವಾರಣೆಗೆ ಮಾಳಪ್ಪಯ್ಯ ವಿವಿಧ ಪೂಜೆ–ಪುನಸ್ಕಾರಗಳನ್ನು ಮಾಡಿಸುತ್ತಾನೆ. ಮತ್ತೇ ಐದನೇ ವರ್ಷದಲ್ಲಿ ಆತ ಮಾರ್ದೇಶಿ ರೋಗದಿಂದ ಬಳಲುತ್ತಾ ಸಾವು–ಬದುಕಿನೊಡನೆ ಹೋರಾಡುತ್ತಾನೆ. ಕಿರಿಸ್ತಾನರಿಂದ ದೂರವಿರಬೇಕೆಂದು ಪ್ರಯತ್ನಿಸುತ್ತಿದ್ದ ಮಾಳಪ್ಪಯ್ಯ ಮಗನ ಜೀವನ ಉಳಿಸಿಕೊಳ್ಳಲು ಕ್ರೈಸ್ತಗುರು ಸಾವಿಯರನ ಮೊರೆ ಹೋಗಬೇಕಾಗುತ್ತದೆ. ಇಲ್ಲಿಂದ ಪ್ರಾರಂಭವಾದ ಕ್ರೈಸ್ತ ಮತದೊಡನೆಯ ಸಂಬಂಧ, ಸಂಘರ್ಷ ವಿಟ್ಠುಪೈಯ ಜೀವನದುದ್ದಕ್ಕೂ ನಡೆಯುತ್ತದೆ.

ವಿಟ್ಠುಪೈ ಬೆಳೆದಂತೆಯೇ ಗೋವೆಯಲ್ಲಿ ಪೋರ್ಚುಗೀಸರ ಆಡಳಿತವು ಪ್ರಬಲವಾಗುತ್ತಾ ಹೋಗುತ್ತದೆ. ಬಾಲ್ಯದಿಂದಲೇ ಕಿವಿಕೇಳಿಸದ ಮಾತುಬಾರದ ಧಡ್ಡ ಆಪ್ತಮಿತ್ರನಾಗುತ್ತಾನೆ. ಉಪನಯನದ ಜೊತೆಗೆ ವಿದ್ಯಾಭ್ಯಾಸವೂ ಪ್ರಾರಂಭವಾಗಿ ಕೆಲವೇ ತಿಂಗಳುಗಳಲ್ಲಿ ವಿಟ್ಠುಪೈಯ ನಿಶ್ಚಿತಾರ್ಥವೂ ನಡೆಯುತ್ತದೆ. ಆದರೆ ಮರ್ತುಕಾಮಾತಿಯ ಸಂಸಾರ ಕಿರಿಸ್ತಾನರಾಗಿ ಮತಾಂತರಗೊಂಡಾಗ ವಿಟ್ಠುಪೈಯ ಮದುವೆ ಮುರಿದುಬಿದ್ದು ಆತನ ತಾಯಿ ರಾಧಾಬಾಯಿ ತೀರಿಕೊಳ್ಳುತ್ತಾಳೆ. ಮತಾಂತರಗೊಳ್ಳದ ಬ್ರಾಹ್ಮಣರ ಕುಟುಂಬಗಳನ್ನು ಹುಡುಕುವುದೇ ಕಷ್ಟವಾಗಿ ಹೇಗೋ ಮಾಳಪ್ಪಯ್ಯನವರು ಅಪ್ಪಣಭಟ್ಟರ ಮಗಳು ತುಳಸೀಬಾಯಿಯ ಜೊತೆ ಯಾವುದೆ ಅಡಂಬರವಿಲ್ಲದೆ

ವಿಟ್ಠುಪೈಯ ಮದುವೆ ಮಾಡಿಸಿ ನಿರಾಳವಾಗುತ್ತಾರೆ. ಈ ಮಧ್ಯೆ ಫ್ರೈಯರ್ ವಿನ್ಸೆಂಟ್ ಗೋಯೆಸ್ ಎಂಬ ಪೋರ್ಚುಗೀಸ ಅಧಿಕಾರಿ ಮತಾಂತರದ ಕಾರ್ಯವನ್ನು ಚುರುಕುಗೊಳಿಸುವುದಲ್ಲದೆ ಬ್ರಾಹ್ಮಣರಿಗೆ ಕಿರುಕುಳ ಕೊಡುತ್ತಾ ದೇವಸ್ಥಾನಗಳನ್ನು ಕೆಡವಲಾರಂಭಿಸುತ್ತಾನೆ.

ಊರಲ್ಲೆಲ್ಲಾ ಮತಾಂತರದ ಹಾಹಾಕಾರ ಹಬ್ಬುತ್ತಿದ್ದ ಹಾಗೆಯೇ ವಿಟ್ಠುಪೈಯ ಜೀವನದಲ್ಲಿ ಆತ ಊಹಿಸಲಾಗದ ಘಟನೆಯೊಂದು ನಡೆಯುತ್ತದೆ. ವಿಟ್ಠುಪೈಯ ಗದ್ದೆಯ ಪಕ್ಕದಲ್ಲೇ ಗೋಯೆಸ್‌ನ ತೋಟವಿದ್ದು ಅದನ್ನು ಆತನ ಮಗಳು ಅಲ್ವೀರಾ ನೋಡಿಕೊಳ್ಳುತ್ತಿರುತ್ತಾಳೆ. ಕೆಲವು ವರ್ಷಗಳ ಹಿಂದೆ ಅಲ್ವೀರಾ ಮದುವೆಯಾಗಬೇಕಿದ್ದ ಸಂಕ್ವಾಳಿಯ ದಾಂ ಅಂತೋಣಿಯೊ–ದೆ–ಕಾಸ್ಪೈಲೋ ಎಂಬುವನು ಸ್ಥಳೀಯ ಜನರಿಂದ ಹಲ್ಲೆಗೊಳಗಾಗಿ ತೀರಿಕೊಂಡಾಗಿನಿಂದ ಆಕೆಗೆ ಬ್ರಾಹ್ಮಣರನ್ನು ಕಂಡರಾಗುತ್ತಿರಲಿಲ್ಲ. ಗದ್ದೆಯ ಕೆಲಸಕ್ಕೆಂದು ಬರುವ ವಿಟ್ಠುಪೈಯನ್ನು ಕಂಡರೆ ಹಲ್ಲು ಮಸೆಯುತ್ತಿದ್ದಳು.

'ಆದರೂ ಅಕ್ಕಪಕ್ಕಗಳಲ್ಲಿ ಕೆಲಸ ಮಾಡುವಾಗ ಆಗಾಗ ಅವರು ಮಾತಾಡುವ ಅಗತ್ಯ ಬಂದೇ ಬರುತ್ತಿತ್ತು. ಆಗೆಲ್ಲ ಇಬ್ಬರೂ ತಮ್ಮ ತಮ್ಮ ಕಡೆಯ ಆಳುಗಳ ಮೂಲಕವೇ ಮಾತುಗಳ ರವಾನೆ ಮಾಡುತ್ತಿದ್ದರೂ ಎದುರಾ ಎದುರೇ ನಿಂತು ಮಾತಾಡಲು ಇಚ್ಛಿಸಲಿಲ್ಲ. ಆಗಾಗ ಜಗಳ, ಬೈಗಳು. ಅವಳ ಹಂದಿಗಳು ತಮ್ಮ ಗದ್ದೆಗೆ ಬಂದುವೆಂದೋ, ತಮ್ಮ ದನಗಳು ಅವಳ ತೋಟ ಪ್ರವೇಶಿಸಿದವೆಂದೋ ಜಗಳ. ಒಮ್ಮೆಯಂತೂ ಅಲ್ವೀರಾ ಆ ಹಸುಗಳು ತಮ್ಮ ತರಕಾರಿ ಗಿಡಗಳನ್ನು ತಿಂದು ಹಾಕಿದರೆ ಅವುಗಳನ್ನು ಕಡಿದು ಹಾಕುವುದಾಗಿ ಎಚ್ಚರಿಕೆ ಬೇರೆ ಕೊಟ್ಟಿದ್ದಳು. ವಿಟ್ಠುಪೈ ಮೊದಮೊದಲು ಹೆದರಿಕೊಳ್ಳುತ್ತಿದ್ದ. ಅವಳಿಗಲ್ಲವಾದರೂ ಅವಳ ತಂದೆಗೆ ಅವನು ಹೆದರಬೇಕಿತ್ತು. ಆದರೆ ಹೆಣ್ಣು ಹೆಂಗಸು ತನಗೇನು ಮಾಡಿಯಾಳು ಎಂದು ಅವನೂ ತುಂಬ ಹಾರಾಡಿದ [ಸ್ವಸಾ. ಪುಟ ೧೧೪]

ಹೀಗಿರುವಾಗ ಒಂದು ದಿನ ತುಳಸೀಬಾಯಿ ಹಸುಗಳು ಇನ್ನೂ ಮನೆಗೆ ಹಿಂತಿರುಗಿಲ್ಲವೆಂದು ತಿಳಿಸಿದಾಗ ಅಲ್ವೀರಾಳೇ ತಮ್ಮ ಹಸುಗಳನ್ನು ಹಿಡಿದಿಟ್ಟುಕೊಂಡಿರ–ಬಹುದೆಂದೆಣಿಸಿದ ವಿಟ್ಠುಪೈಯ ಕೋಪ ತಾರಕಕ್ಕೇರಿತು. ಅವಳೊಡನೆ ಜಗಳವಾಡಲು ನೇರ ಅವಳ ತೋಟಕ್ಕೆ ನುಗ್ಗಿದನು.

'ದುಡು ದುಡು ಬಂದ ವಿಟ್ಠುಪೈ ಅವಳನ್ನು ಕೊಂದೇ ಬಿಡುವಷ್ಟು ಕ್ರೋಧದಿಂದ ಹೋಗಿ ಅವಳೆದುರು ನಿಂತ. ಅವಳನ್ನು ಕೆಂಗಣ್ಣಿನಿಂದ ನೋಡಿದ. ನಖಶಿಖಾಂತ ಉರಿಯತೊಡಗಿದ. ಆಕಸ್ಮಾತ್ತಾಗಿ ತನ್ನೆದುರು ನಿಂತ ಬ್ರಾಹ್ಮಣ ತರುಣನನ್ನು ಕಂಡು ಅಲ್ವೀರಾಗೂ ದಿಗ್ಭ್ರಮೆ. ಆಕೆಯೂ ದಿಟ್ಟತನದಿಂದ ತಲೆ ಎತ್ತಿ ಅವನನ್ನೇ ದಿಟ್ಟಿಸಿ ನೋಡಿದಳು. ವಿಟ್ಠುಪೈಯ ರೌದ್ರ ಕಣ್ಣುಗಳ ಇರಿತಕ್ಕೆ ಚೆನ್ನಾಗಿ ಬೆವರಿದ ಅಲ್ವೀರಾಳ

ಇಡೀ ದೇಹ ಕಂಪಿಸಿತು. ಮುಖವೊರೆಸಲು ಎತ್ತಿದ ಲಂಗ ಕೆಳಗೆ ಬಿಟ್ಟ ಅಲ್ವೀರಾ 'ಏನೋ ಪೋರಾ? ಅನ್ನುವಂತೆ ನೋಡಿದಳು. ವಿಟ್ಠುಪೈಯೂ ಕ್ರೋಧದಿಂದ ನಡುಗಿದ. ಈ ಹೆಣ್ಣಿನ ಎದುರು ತಾನು ಸೋಲುತ್ತಿದ್ದೇನೆಂಬ ಅಪಮಾನದ ಅರಿವು ಅವನನ್ನು ಸರ್ಪದಂತೆ ಪೂತ್ಕರಿಸುವಂತೆ ಮಾಡಿತು. 'ತೂss' ಎಂದು ಕಿರುಚುತ್ತಾ ಅವನು ಅವಳ ಮೈ ಮೇಲೆ ಹಾರಿದ !

ಅಲ್ವೀರಾಳಿಗೆ ಈ ಆಕ್ರಮಣ ಹೊಸದು. ಆಕೆ ನಿಶ್ಚಲವಾಗಿ ನಿಂತಳು. ವಿಟ್ಠುಪೈಯ ಸಿಟ್ಟಿನಿಂದ ಸೆಟೆದ ಮೈ ಅವಳ ಮೇಲೆರಗಿತು. ಆದರೆ ಅವಳ ಸ್ಪರ್ಶವಾಗುತ್ತಲೇ ವಿಟ್ಠುಪೈಯ ಒಳಗೆ ಮಿಂಚು ಬಡಿದಂತೆ ಏನೋ ಆಯಿತು. ಹಾರಿದ ರಭಸಕ್ಕೆ ಅಲ್ವೀರಾ ಕೆಳಗೆ ಬಿದ್ದಳು. ವಿಟ್ಠುಪೈ ಅವಳ ಮೇಲೆ ತನ್ನ ಗಂಡಸುತನದ ಪ್ರದರ್ಶನ ಮಾಡಿದ ! [ಸ್ವಸಾ. ಪುಟ ೧೧೫]

ಹೀಗೆ ವಿಟ್ಠುಪೈ ತನಗಿಂತ ೧೫ ವರ್ಷ ಹಿರಿಯಳಾದ ಅಲ್ವೀರಾಳ ಜೊತೆಗೆ ಸಂಬಂಧ ಬೆಳೆಸುತ್ತಾನೆ. ದಿನೇ ದಿನೇ ವಿಟ್ಠುಪೈಯ ಮೇಲೆ ಅಲ್ವೀರಾಳ ಆಕರ್ಷಣೆ ಹೆಚ್ಚುತ್ತಲೇ ಹೋಗುತ್ತದೆ.

'ಆ ಕ್ಷಣ ಮತಾಂತರವಾಗುವುದಿದ್ದರೆ ಅದಕ್ಕೂ ನಾನು ಸಿದ್ಧನಿದ್ದೆ ರಾಚ್ಚೂ, ನನಗೆ ಬೇಕಿದ್ದುದು ಆಗ ಅಲ್ವೀರಾಳ ತೆಕ್ಕೆ ಮಾತ್ರ. ಆ ಆಸೆ, ಉದ್ವೇಗ, ಉತ್ಕಂಠೆಗಳ ಎದುರು ಬೇರೇನೂ ಕಾಣುತ್ತಿರಲಿಲ್ಲ. ಅಲ್ವೀರಾ ನಾನು ನೋಡಿದ ಅತ್ಯಂತ ಒಳ್ಳೆಯ ಹೆಣ್ಣು. ಆಕೆಯ ವಯಸ್ಸು ಅದಕ್ಕೆ ಕಾರಣವಿರಬಹುದು. ನನಗೆ ನಾನು ಸೋತಂತೆ ಕಂಡರೂ ಅವಳನ್ನು ಗೆದ್ದಿದ್ದೆ' – [ಸ್ವಸಾ. ಪುಟ ೧೧೬]

ಈ ವಿಷಯ ಬಹಿರಂಗವಾಗದೆ ಗುಟ್ಟಾಗೇ ನಡೆದರೂ ವಿಟ್ಠುಪೈ ನಾಗ್ಡೊ ಬೇತಾಳನ ಮುಂದೆ ಬರಲು ಮಾತ್ರ ಹೆದರುತ್ತಾನೆ. ಆದರೆ ನಾಗ್ಡೊ ಬೇತಾಳ ಈ ವಿಷಯದ ಬಗ್ಗೆ ಚಕಾರವೆತ್ತದಾಗ ವಿಟ್ಠುಪೈ ನಿರಾಳವಾಗುತ್ತಾನೆ.

ಬರಬರುತ್ತಾ ಪೋರ್ಚುಗೀಸರ ಕ್ರೌರ್ಯ ಹೆಚ್ಚಾಗಿ ಅವರ ಹಿಂಸೆಯನ್ನು ತಡೆಯಲಾರದೆಯೋ ಇಲ್ಲಾ ಅವರು ಒಡ್ಡುವ ಆಮಿಷಗಳಿಗೆ ಬಲಿಯಾಗಿಯೋ ನೂರಾರು ಸಂಖ್ಯೆಗಳಲ್ಲಿ, ಕೆಳ ಜಾತಿಯವರೇ ಮಾತ್ರವಲ್ಲದೆ ಬ್ರಾಹ್ಮಣರು ಸಹ ನೂರಾರು ಸಂಖ್ಯೆಗಳಲ್ಲಿ ಮತಾಂತರವಾಗಲಾರಂಭಿಸುತ್ತಾರೆ. ಮುದುಕನಾದರೂ ಆತನ ಮತಾಂಧತೆ ಕಿಂಚಿತ್ತೂ ಕ್ಷೀಣಿಸದ ಗೋಯೆಸ್ ವೆರಣೆಯು ದೇವಸ್ಥಾನಗಳನ್ನು ಕೆಡವಲಾರಂಭಿಸುತ್ತಾನೆ.

ಸಾರಸ್ವತರು ಮತಾಂತರದ ಪಿಡುಗಿನಿಂದ ಹೇಗೆ ರಕ್ಷಿಸಿಕೊಳ್ಳಬೇಕೆಂದು ತಿಳಿಯದೆ ನಾಗ್ಡೊ ಬೇತಾಳನ ಮೊರೆ ಹೋಗುತ್ತಾರೆ 'ನೆಲದ ಋಣ, ನೀರಿನ ಋಣ, ಹೆಣ್ಣಿನ ಋಣ ಬಿಡಲು ಸಿದ್ದನಿದ್ದೀಯಾ?' ಎಂದು ನಾಗ್ಡೊ ಬೇತಾಳ ವಿಟ್ಠುಪೈಯನ್ನು ನೇರವಾಗಿ

ಕೇಳಿದಾಗ ವಿಟ್ಠುಪೈಯ ಎದೆ ನಡಗುತ್ತದೆ. ಇಲ್ಲಿ ನಾಗ್ಡೊ ಬೇತಾಳ 'ಹೆಣ್ಣಿನ ಋಣ' ಎಂದು ಹೇಳುವುದು ಆತನಿಗೆ ವಿಟ್ಠುಪೈಗೆ ಅಲ್ವೀರಾಳ ಜೊತೆ ಇದ್ದ ಸಂಬಂಧದ ಬಗ್ಗೆ ಗೊತ್ತಿತ್ತು ಎಂಬುದನ್ನು ಸೂಚಿಸುತ್ತದೆ.

ವಿಟ್ಠುಪೈಯಿಂದಲೇ ದೇವಸ್ಥಾನದ ಬಾಗಿಲಿಗೆ ಬೀಗ ಹಾಕಿಸುವ ನಾಗ್ಡೊ ಬೇತಾಳ ಯಾರಿಗೂ ತಿಳಿಯದಂತೆ ಧಡ್ಡನ ಮೂಲಕ ದೇವಿಯ ಮೂರ್ತಿಯನ್ನು ಸುರಕ್ಷಿತ ಜಾಗಕ್ಕೆ ಸಾಗಿಸಿಬಿಟ್ಟಿರುತ್ತಾನೆ. ಆದರೆ ಈ ವಿಷಯವನ್ನರಿಯದ ವಿಟ್ಠುಪೈ ಧಡ್ಡನ ಮೇಲೆ ರೇಗುತ್ತಾನೆ. ಈ ಸನ್ನಿವೇಶದಲ್ಲಿ ವಿಟ್ಠುಪೈ ಧಡ್ಡನ ಮೇಲೆ ಕೋಪಗೊಳ್ಳುವುದು ಆತನ ಮನಸ್ಸಿನ ಆತಂಕ, ಅಧೈರ್ಯಗಳನ್ನು ವ್ಯಕ್ತಪಡಿಸುತ್ತದೆ. ಬಾಲ್ಯದಿಂದಲೂ ಎಂತಹ ಸಮಯದಲ್ಲೂ ಜೊತೆಯಲ್ಲಿದ್ದು ಸಹಕರಿಸುತ್ತಿದ್ದ ಧಡ್ಡ ಸಂದಿಗ್ಧ ಪರಿಸ್ಥಿತಿಯಲ್ಲಿ ಜೊತೆಯಲ್ಲಿಲ್ಲದುದು ಆತನ ಅಸಹನೆಯ ಕಾರಣವಾಗುತ್ತದೆ. ನಂತರ ಧಡ್ಡನು ಮಾಡಿದ ಮಹತ್ಕಾರ್ಯದ ಬಗ್ಗೆ ತಿಳಿದಾಗ ಪಶ್ಚಾತ್ತಾಪ ಪಡುತ್ತಾನೆ. ದೇವಿಯ ಮೂರ್ತಿಯನ್ನು ಕಾಣದೆ ಕುಪಿತಗೊಂಡ ಪೋರ್ಚುಗೀಸರು ವಿಟ್ಠುಪೈಯೂ ಸೇರಿದಂತೆ ಊರಿನ ಗಂಡಸರನ್ನೆಲ್ಲಾ ಸೆರೆಹಿಡಿದು ನಾನಾ ರೀತಿಯಲ್ಲಿ ಹಿಂಸೆ ನೀಡುತ್ತಾರೆ. ದೈಹಿಕ ಚಿತ್ರಹಿಂಸೆಯ ನೋವನ್ನು ತಡೆಯಲಾರದೆ ವಿಟ್ಠುಪೈ ಅರೆಪ್ರಜ್ಞಾವಸ್ಥೆಯಲ್ಲಿ ಧಡ್ಡನ ಹೆಸರನ್ನು ಹೇಳಿಬಿಡುತ್ತಾನೆ. ನಂತರ ಅನ್ನುಕಾಮಾತಿಯ ಹತ್ತಿರ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ.

"ಅನ್ನು ಕಾಮಾತಿ, ಹೇಳುವ ನಾಲಗೆ ನನಗೆ ಬರಲಿಲ್ಲ, ಅನ್ನು ಕಾಮಾತಿ, ಧಡ್ಡನ ಹೆಸರು ಹೇಳುವುದು ನನ್ನ ಮನಸ್ಸು ಒಪ್ಪಲೇ ಇಲ್ಲ. ಆದರೆ ನಾಲಗೆಗೂ ಮನಸ್ಸಿಗೂ ಘರ್ಷಣೆಯಾಗುತ್ತಿತ್ತು. ಕೊನೆಗೂ ಆ ಹೆಸರು ಹೊರಗೆ ಬಂದಾಗ ನಾನು ಪ್ರಜ್ಞೆ ತಪ್ಪಿಬಿದ್ದುಬಿಟ್ಟೆ" [ಸ್ವಸಾ. ಪುಟ ೧೪೭]

ತನ್ನ ಜೀವದ ಗೆಳೆಯ ಧಡ್ಡನನ್ನು ಬಿಟ್ಟು ಕೊಟ್ಟ ಪಶ್ಚಾತ್ತಾಪ ವಿಟ್ಠುಪೈಯನ್ನು ಜೀವನ ಪರ್ಯಂತ ಕಾಡುತ್ತದೆ.

ವಿಟ್ಠುಪೈ ಧಡ್ಡನ ಹೆಸರನ್ನು ಹೇಳಿದ್ದರಿಂದ ಧಡ್ಡ ಭೀಕರವಾಗಿ ಕೊಲ್ಲಲ್ಪಡುತ್ತಾನೆ. ಇದರಿಂದ ರೊಚ್ಚಿಗೆದ್ದ ನಾಗ್ಡೊ ಬೇತಾಳ ವಿಟ್ಠುಪೈಗೆ ಶಾಪಕೊಡುತ್ತಾನೆ. ವಿಟ್ಠುಪೈ ಪರಿಪರಿಯಾಗಿ ಕ್ಷಮೆ ಬೇಡುತ್ತಾನೆ.

"ಕೊಟ್ಟ ಶಾಪವನ್ನು ಹಿಂದಕ್ಕೆ ತೆಗೆಯುವ ಹಾಗಿಲ್ಲ. ವಿಟ್ಠುಪೈ ನಿನಗೆ ಮ್ಹಾಳಶಿಮಾಂಯಿಯನ್ನು ನೋಡುವ ಯೋಗ್ಯತೆಯಿಲ್ಲ. ಅವಳ ಪೂಜೆ ಮಾಡುವ ಅರ್ಹತೆಯಿಲ್ಲ. ಆದರೆ ನಾನ್ನೂರು ವರ್ಷಗಳ ಬಳಿಕ ಮತ್ತೆ ನಿನ್ನ ಸಂತಾನಕ್ಕೆ ಮ್ಹಾಳಶಿಮಾಂಯಿ ದೊರೆಯುತ್ತಾಳೆ. ನಾಲ್ವರಲ್ಲಿ ಒಂದರಂತೆ ನಿನ್ನ ಸಂತಾನ ನಿಶ್ಶೇಷವಾದರೂ ಸಾರಸ್ವತ ಕುಟುಂಬದ ಹೆಣ್ಣುಗಳಿಗೆಲ್ಲ ಹನ್ನೆರಡು ಗರ್ಭಧರಿಸುವ ಶಕ್ತಿ

ಕೊಡುತ್ತೇನೆ. ಹಾಗಾಗಿ ಶಾಪವಿದ್ದೂ ನಿನ್ನ ಕುಟುಂಬಗಳು ವೃದ್ಧಿಯಾಗುತ್ತದೆ. ನಾನ್ನೂರು ವರ್ಷಗಳ ಬಳಿಕ ನಿನ್ನ ಕುಟುಂಬದ ಜನರು ಮತ್ತೇ ಬರುತ್ತಾರೆ, ಮ್ಹಾಳ ಶಿಮಾಂಯಿಯನ್ನು ಪೂಜಿಸುತ್ತಾರೆ. ನಿನ್ನ ಮೇಲಿನ ಶಾಪ ಬಿಡುಗಡೆಯಾಗುತ್ತದೆ ಹೋಗು ಎಂದ [ಸ್ವಸಾ. ಪುಟ ೧೪೪]

ಹೀಗೆ ವಿಟ್ಠೂ ಪೈ ಧಡ್ಡನ ಶವಸಂಸ್ಕಾರವನ್ನೂ ಮಾಡದೆ ವೆರಣೆಯನ್ನು ಬಿಟ್ಟು ಹೊರಡುತ್ತಾನೆ.

'ಅಶ್ವತ್ಥಾಮನಂತೆ ಬೆನ್ನಿಗೆ ಶಾಪಗಳನ್ನು ಕಟ್ಟಿಕೊಂಡು, ಬೆಳಗಿನ ಜಾವದಲ್ಲಿ ವಿಟ್ಠುಪೈ ವೆರಣೆಯನ್ನು ಬಿಟ್ಟಿದ್ದ. ಚಕ್ಕಡಿಯ ಗಾಲಿ ಒಂದೊಂದು ಸುತ್ತು ತಿರುಗಿದ ಹಾಗೆ, ಅದು ಸವೆದ ದಾರಿಯನ್ನು ಮತ್ತೆ ತಾನು ತುಳಿಯುವ ಹಾಗಿಲ್ಲ ಎಂಬ ಅನಾಥ ಭಾವನೆ. ಒಟ್ಟು ನಲವತ್ತನಾಲ್ಕು ಕುಟುಂಬಗಳು ಮೂವತ್ತು ಮೂವತ್ತೈದು ಚಕ್ಕಡಿಗಳು' [ಸ್ವಸಾ. ಪುಟ ೧೫೭]

ಹೀಗೆ ವಿಟ್ಠುಪೈ ತನ್ನ ಜೀವನದ ಹೊಸ ಅಧ್ಯಾಯದ ಅನ್ವೇಷಣೆಗೆ ಹೊರಡುತ್ತಾನೆ. ಅನುಕೂಲವಿದ್ದ ಸ್ಥಳಗಳಲ್ಲಿ ತಂಗುತ್ತಾ ಪೋರ್ಚುಗೀಸರ ಭೀತಿಯಲ್ಲೇ ಪ್ರಯಾಣ ಮುಂದುವರೆಯುತ್ತದೆ.

"ಅನ್ನು ಕಾಮಾತಿ, ನನ್ನನ್ನು ಬಿಟ್ಟು ಹೋಗುವುದಿಲ್ಲ ಎಂದು ಮಾತು ಕೊಡುತ್ತೀಯಾ? ನನಗೆ ತುಂಬಾ ಹೆದರಿಕೆಯಾಗುತ್ತಿದೆ" ಎಂದು ಆಗಾಗ ವಿಟ್ಠುಪೈ ಹೇಳುವುದು ಮಾನವ ಸಹಜ ದುರ್ಬಲತೆಯಾಗಿ ಮೂಡಿಬಂದಿದೆಯಾದರೂ ಇದರಿಂದ ಆತನ ವರ್ಚಸ್ಸಿಗೆ ಧಕ್ಕೆ ಬರುವುದಿಲ್ಲ. ಆತ ಎದೆಗುಂದದೆ ತನ್ನನ್ನು ನಂಬಿ ಬಂದವರ ಸುರಕ್ಷತೆಯ ಜವಾಬ್ದಾರಿ ಹೊರುತ್ತಾನೆ. ಹಾಗೆಯೇ ಸಂಕಷ್ಟ ಪರಿಸ್ಥಿತಿಗಳಲ್ಲಿ 'ಕಿರಿಸ್ಥಾನನಾಗಿ ಬಿಡಲೇ, ಅಲ್ವೀರಾಳ ಹತ್ತಿರ ಹೋಗಿ ಬಿಡಲೇ?' ಎಂದೂ ಸಹ ಚಿಂತಿಸಿದರೂ ಇದಕ್ಕಾಗಿಯೇ ಏನು ಧಡ್ಡ ಪ್ರಾಣ ತ್ಯಾಗ ಮಾಡಿದ್ದು? ಆತನ ಬಲಿದಾನಕ್ಕೆ ಕಳಂಕ ತರಬಾರದು. ಎಂದು ಅಂತಹ ವಿಚಾರಗಳನ್ನು ಮನದಿಂದ ಹೊಡೆದೋಡಿಸುತ್ತಾನೆ. ಪ್ರಯಾಣದ ದಾರಿಯಲ್ಲಿ ಮರ್ತುಕಿಣಿ ಸಿಕ್ಕಿದಾಗ ವಿಟ್ಠುಪೈ ಆತನಲ್ಲಿ ಧಡ್ಡನನ್ನೇ ಕಾಣುತ್ತಾನೆ, ಮರ್ತುಕಿಣಿ ಸಹ ವಿಟ್ಠುಪೈಯ ಪ್ರತಿಯೊಂದು ಕೆಲಸದಲ್ಲೂ ಸಹಕಾರ ನೀಡುತ್ತಾ ಗೆಳೆಯನಾಗಿಬಿಡುತ್ತಾನೆ. ಗುಂಪಿನಲ್ಲಿ ನಡೆಯುವ ಸಾವು-ನೋವು, ಅಹಿತಕರ ಘಟನೆಗಳನ್ನೆಲ್ಲಾ ಎದುರಿಸುತ್ತಾ ಕುಂಬಳೆಯನ್ನು ತಲುಪಿದ ವಿಟ್ಠುಪೈ ಮರ್ತುಕಿಣಿಯ ಸಾವಿನಿಂದ ಮತ್ತೇ ಹತಾಶನಾಗುತ್ತಾನೆ. ಅಷ್ಟರಲ್ಲಿ ಹೆಂಡತಿ ಗರ್ಭಿಣಿಯೆಂದು ತಿಳಿಯುವುದರ ಜೊತೆಗೆ ಅಪ್ಪಣಭಟ್ಟರ ಭೇಟಿಯಾದಾಗ ವಿಟ್ಠುಪೈ ಕುಂಬಳೆಯಲ್ಲೇ ನೆಲೆಯೂರಲು ನಿರ್ಧರಿಸುತ್ತಾನೆ.

ಕುಂಬಳೆಯಲ್ಲಿ ಬೀಡುಬಿಟ್ಟ ವಿಟ್ಠುಪೈ ಹೊಸ ವ್ಯಾಪಾರವನ್ನು ಪ್ರಾರಂಭಿಸುತ್ತಾನೆ. ನಾಲ್ಕು ಗಂಡುಮಕ್ಕಳ ಹಾಗೂ ಒಬ್ಬ ಹೆಣ್ಣು ಮಗಳ ತಂದೆಯಾಗಿ ತನ್ನ ಸಂಸಾರದ ಜವಾಬ್ದಾರಿ ನಿರ್ವಹಿಸುವುದರಲ್ಲೇ ಹಲವಾರು ವರ್ಷಗಳು ಕಳೆದಿರುತ್ತವೆ. ಆದರೂ ಆತನ ಮನಸ್ಸಿನಲ್ಲಿ ತಾನೊಂದು ಜಾಗವನ್ನು ಖರೀದಿಸಿ ಗೋವೆಯ ವೆರಣೆಯನ್ನು ಸೃಷ್ಟಿಸುವ ಹಂಬಲ ದಿನೇ ದಿನೇ ಹೆಚ್ಚಾಗುತ್ತಾ ಹೋಗುತ್ತದೆ.

ಆದರೆ ಮಕ್ಕಳ ಮದುವೆ ಮಾಡಿಸಿ ತನ್ನ ಜೊತೆ ಬಂದ ಕುಟುಂಬಗಳಿಗೂ ಒಂದು ನೆಲೆ ಮಾಡಿಕೊಡುವುದರಲ್ಲಿ ವ್ಯಸ್ತನಾದ ವಿಟ್ಠು ಪೈಗೆ ತನ್ನ ಕನಸನ್ನು ಈಡೇರಿಸಲಾಗಲಿಲ್ಲ. ಅದರ ಮಧ್ಯೆ ಆತನ ಮೊದಲನೆಯ ಮಗ ನಾಗಪ್ಪಯ್ಯನಿಗೆ ಮಕ್ಕಳಾಗದಿದ್ದುದು, ಎರಡನೆಯ ಮಗ ಮರ್ತಪ್ಪಯ್ಯ ತನ್ನ ಇಬ್ಬರು ತಮ್ಮಂದಿರನ್ನು ಸಮುದ್ರದಲ್ಲಿ ತಳ್ಳಿದನೆಂಬ ಆರೋಪದಿಂದ ಮನೆಬಿಟ್ಟು ಹೋದದ್ದು. ಇಬ್ಬರು ಮಕ್ಕಳು ನೀರುಪಾಲಾದದ್ದು, ಈ ಎಲ್ಲಾ ಅನಾಹುತಗಳು ವಿಟ್ಠು ಪೈಯನ್ನು ಝುರ್ಝುರಿತನಾಗಿಸುತ್ತದೆ. ತನ್ನ ಪೂರ್ವಜರ ವಂಶಗಾಥೆಯನ್ನು ಮೊಮ್ಮಗ ರಾಮಚಂದ್ರ ಪೈನಿಗೆ ಹೇಳುತ್ತಿದ್ದ ಹಾಗೆಯೇ ತನ್ನ ಕನಸನ್ನು ಸಹ ಪೂರೈಸುವಂತೆ ಮೊಮ್ಮಗನಿಗೆ ಹೇಳಿ ಕೊನೆಯುಸಿರೆಳೆಯುತ್ತಾನೆ.

## ರಾಮಚಂದ್ರ ಪೈ

ವಿಟ್ಠುಪೈಯ ಎರಡನೆಯ ಮಗ ಮರ್ತಪ್ಪಯ್ಯನ ಮೊದಲನೆಯ ಮಗನಾದ ರಾಮಚಂದ್ರಪೈ ಚಿಕ್ಕವನಾಗಿದ್ದಾಗಲೇ ಅಜ್ಜ ವಿಟ್ಠುಪೈಯಿಂದ ಗೋವೆಯಲ್ಲಿದ್ದ ಸಾರಸ್ವತ ಸಮುದಾಯದ ಹಾಗೂ ವೆರಣೆಯಲ್ಲಿದ್ದ ತನ್ನ ಪೂರ್ವಜರ ಕಥೆಯನ್ನು ವಿವರವಾಗಿ ಕೇಳಿರುತ್ತಾನೆ. ಚಿಕ್ಕವನಾಗಿದ್ದಾಗ ಹಠವಾದಿಯಾಗಿದ್ದ ರಾಮಚಂದ್ರ ಪೈ ಬೆಳೆಯುತ್ತಾ ಹೋದಂತೆ ದೊಡ್ಡಪ್ಪ ನಾಗಪ್ಪಯ್ಯನ ಮಾರ್ಗದರ್ಶನದಲ್ಲಿ ವ್ಯಾಪಾರ ಮಾಡಲಾರಂಭಿಸುತ್ತಾನೆ. ಹದಿನಾರನೆಯ ವಯಸ್ಸಿನಲ್ಲಿ ಪಾರ್ವತಿಬಾಯಿಯೊಡನೆ ಮದುವೆಯಾಗಿ ಸಂಸಾರಸ್ಥನೂ ಆಗುತ್ತಾನೆ. ಇಬ್ಬರು ಚಿಕ್ಕಪ್ಪಂದಿರು ನೀರಿನಲ್ಲಿ ಮುಳುಗಿ ಸತ್ತಾಗ ಆ ಆರೋಪ ರಾಮಚಂದ್ರ ಪೈಯ ತಂದೆ ಮರ್ತಪ್ಪಯ್ಯನ ಮೇಲೆ ಬಂದಾಗ ಮರ್ತಪ್ಪಯ್ಯ ಮನೆಯನ್ನು ಬಿಟ್ಟು ಹೊರಟು ಹೋಗುತ್ತಾನೆ. ಹೀಗೆ ಅಪ್ಪನಿದ್ದು ಇಲ್ಲದಂತಾದ ರಾಮಚಂದ್ರಪೈ ಮಕ್ಕಳಿಲ್ಲದ ನಾಗಪ್ಪಯ್ಯನಿಗೆ ತಂದೆಯಸ್ಥಾನ ಕೊಟ್ಟು ಆತ ಹೇಳಿದಂತೆಯೇ ನಡೆಯುತ್ತಾನೆ. ಗಂಡಂದಿರಿಲ್ಲದ ಚಿಕ್ಕಮ್ಮಂದಿರು, ಗಂಡನನ್ನು ಕಳೆದುಕೊಂಡ ಸೋದರತ್ತೆ ಎಲ್ಲರ ಜವಾಬ್ದಾರಿಯೂ ರಾಮಚಂದ್ರ ಪೈನೇ ಹೊರಬೇಕಾಗುತ್ತದೆ. ಮೊದಮೊದಲಿಗೆ ಬೇಸತ್ತು ಕಟುನುಡಿಗಳನ್ನಾಡಿ ಆ ಹೆಂಗಸರ ಮನ ನೋಯಿಸುವ ರಾಮಚಂದ್ರ ಪೈ ಪ್ರೌಢನಾಗುತ್ತಿದ್ದಂತೆ ಮನೆಯಲ್ಲಿದ್ದ ಕುಟುಂಬದ ಮಕ್ಕಳನ್ನೂ ತನ್ನ ವ್ಯಾಪಾರಕ್ಕೆ ಸೆಳೆದುಕೊಂಡು ನಾಲಗೆ ಬಲದಿಂದ, ಚಾಣಕ್ಯತನದಿಂದ ವ್ಯಾಪಾರವನ್ನು ವಿಸ್ತರಿಸುತ್ತಾನೆ.

'ಕುಂಬಳೆಯ ಪಕ್ಕದ ಊರದ ಬೇಳಕಟ್ಟೆಯ ಒಂದು ಅರಳೀ ಕಟ್ಟೆಯ ಮೇಲೆ ತನ್ನೆಲ್ಲ ಸಾಮಾನುಗಳನ್ನೂ ಹರಡಿಕುಳಿತುಕೊಳ್ಳುವ ರಾಮಚಂದ್ರ ಪೈಯನ್ನು ಜನರು ದಿನಾ ನೋಡುವಂತಾಯಿತು. ರಾಮಚಂದ್ರ ಪೈ ಅತ್ತಿತ್ತ ಹೋಗುವವರನ್ನು ಆಕರ್ಷಿಸಲು ಕಟ್ಟೆಯ ಮೂಲೆಯಲ್ಲಿ ಹೂಜಿಯೊಂದರಲ್ಲಿ ತಣ್ಣೀರು ತುಂಬಿ ಇಡುತ್ತಿದ್ದ. ಬಂದವರಿಗೆ ನೀರು, ಬೆಲ್ಲದ ಮುದ್ದೆ ಎದುರಿಟ್ಟು ಅದೂ ಇದೂ ಮಾತನಾಡುತ್ತಾ ವ್ಯಾಪಾರ ಕುದುರಿಸಿಕೊಳ್ಳತೊಡಗಿದ' [ಸ್ವಸಾ. ಪುಟ ೨೭೧]

ಹೀಗೆ ಮಾತಿನ ಚಾಕಚಕ್ಯತೆಯಿಂದಲೇ ವ್ಯಾಪಾರವನ್ನು ಏರುಮುಖವಾಗಿಸಿದ ರಾಮಚಂದ್ರಪೈಯನ್ನು ಜನರು 'ಬೇಳಕಟ್ಟೆ ರಾಮಚಂದ್ರ ಪೈ' ಎಂದೇ ಕರೆಯಲಾರಂಭಿಸಿದರು. ಮನೆಯ ಸದಸ್ಯರಿಗೆ ಮಾತ್ರವಲ್ಲದೇ ವಿಟ್ಠುಪೈಯ ಜೊತೆ ಬಂದು ನೆಲೆಸಿದ ಇತರ ಸಾರಸ್ವತ ಕುಟುಂಬದವರಿಗೆ ಸಹಾಯ ಮಾಡುತ್ತಾ ಎಲ್ಲರಿಗೂ ಬೇಕಾದವನಾಗುತ್ತಾನೆ. ಆದರೆ ಯಾವುದೇ ಕೆಲಸ-ಕಾರ್ಯಗಳೇ ಇರಲಿ ವಿಟ್ಠುಪೈಯನ್ನು ಹಾಗು ನಾಗ್ಡೊ ಬೇತಾಳನನ್ನು ನೆನಪಿಸಿಕೊಳ್ಳದೆ ಮಾಡುತ್ತಿರಲಿಲ್ಲ.

ವ್ಯಾಪಾರ ವಿಸ್ತರಿಸಿ ಆರ್ಥಿಕ ಸ್ಥಿತಿ ಸುಧಾರಿಸಿದಾಗ ವಿಟ್ಠುಪೈ ಹೇಳಿದ್ದಂತೆ ಒಂದು ಜಾಗವನ್ನು ಖರೀದಿಸಿ ಅಲ್ಲಿ ಗೋವೆಯ ವೆರಣೆಯನ್ನು ಸೃಷ್ಟಿಸಲು ಮುಂದಾಗುತ್ತಾನೆ. ಅಷ್ಟರಲ್ಲಿ ಕುಂಬಳೆಯಲ್ಲಿ ವೀರವಿಠ್ಠಲನ ದೇವಸ್ಥಾನವನ್ನು ಕಟ್ಟಿಸಲು ಅಲ್ಲಿನ ಸಾರಸ್ವತರು ನಿರ್ಧರಿಸಿದಾಗ ರಾಮಚಂದ್ರ ಪೈ ಸಹ ತನ್ನ ನೆರವನ್ನು ನೀಡುತ್ತಾನೆ. ಈ ಮಧ್ಯೆ ಜಾಗ ಖರೀದಿಸುವತ್ತ ಗಮನಹರಿಸಲಾಗದಿದ್ದಾಗ ಆತನ ಕಣ್ಣಿನ ಮುಂದಿನ ಹುಡುಗ ತಾನೇ ವ್ಯಾಪಾರ ಹಚ್ಚಿಕೊಟ್ಟ ಹುಡುಗ ದಾಸ ಮಲ್ಯ ತೋಟವನ್ನು ಖರೀದಿಸಿದಾಗ ರಾಮಚಂದ್ರಪೈಗೆ ಅಸೂಯೆಯೂ ಆಗುತ್ತದೆ. ನಂತರ ಸೂಕ್ತ ಜಾಗದ ಹುಡುಕಾಟದಲ್ಲಿ ತೊಡಗಿದ ರಾಮಚಂದ್ರಪೈಗೆ ತನ್ನ ಬೇಳಕಟ್ಟೆಯ ಅಂಗಡಿಗೆ ಸಾಮಾನುಕೊಳ್ಳಲು ಬರುವ ದುಗ್ಗಮ್ಮನ ಮೂಲಕ ಬಂಬಮಣಿಯಾಣಿಯ ಪರಿಚಯವಾಗುತ್ತದೆ. ಬಳ್ಳಂಬೀಡಿನಲ್ಲಿ ಬಂಬಮಣಿಯಾಣಿಯ ಮನೆ ಮತ್ತು ವಿಶಾಲ ತೋಟವಿದ್ದು ಅದನ್ನು ಆತ ಮಾರಲು ಪ್ರಯತ್ನಿಸುತ್ತಿದ್ದಾನೆಂದು ದುಗ್ಗಮ್ಮನಿಂದ ಅರಿತ ರಾಮಚಂದ್ರ ಪೈ ತನ್ನ ನಾಲಗೆಯ ಬಲವನ್ನುಪಯೋಗಿಸಿ ಮಣಿಯಾಣಿಯನ್ನು ಒಪ್ಪಿಸಿ ಆಸ್ತಿಯನ್ನು ಖರೀದಿಸುತ್ತಾನೆ. ಧರ್ಮಸ್ಥಳದ ಹೆಗ್ಗಡೆಯವರ ಸಮಕ್ಷಮದಲ್ಲಿ ಈ ಕಾರ್ಯನಡೆದು. ಅಂದಿನಿಂದ ಯಾವುದೇ ಕೆಲಸ-ಕಾರ್ಯಗಳನ್ನು ಧರ್ಮಸ್ಥಳದ ಮಂಜುನಾಥನ, ಧರ್ಮಾಧಿಕಾರಿ ಹೆಗ್ಗಡೆಯವರ ಆಶೀರ್ವಾದವಿಲ್ಲದೆ ಮುಂದುವರಿಸದ ರಾಮಚಂದ್ರ ಪೈ ತಾನು 'ಧರ್ಮಸ್ಥಳದ ಒಕ್ಕಲು' ಎಂದು ಒಪ್ಪಿಕೊಂಡು ಕನ್ನಡ ಸಂಸ್ಕೃತಿಯನ್ನು ತನ್ನದಾಗಿಸಿಕೊಳ್ಳುತ್ತಾನೆ.

ಬಳ್ಳಂಬೀಡಿನಲ್ಲಿ ವಾಸಿಸಲಾರಂಭಿಸಿದ ರಾಮಚಂದ್ರ ಪೈಗೆ ತನ್ನ ಅಜ್ಜ ಕಂಡ ಕನಸನ್ನು ತಾನು ನನಸಾಗಿಸಿದ್ದು ಹೆಮ್ಮೆ ಎನಿಸುತ್ತದೆ.

---

'ಗೋವಾದ ವರುಣಾಪುರದಿಂದ ಹೊರಟು ತೆಂಕಣದಲ್ಲಿ ನೆಲೆ ನಿಂತ ಕೌಂಶಗೋತ್ರದ ವಿಟ್ಠು ಪೈಯ ಸಂತಾನ ತುಂಬಿದ ಮರದಂತೆ ಹರವಾಗಿ ಬೆಳೆದುನಿಂತ ರೀತಿ ನೆನೆದಾಗ ಬಳ್ಳಂಬೀಡು ರಾಮಚಂದ್ರ ಪೈಯ ಮನ ಪುಳಕಗೊಳ್ಳುತ್ತಿತ್ತು. ಸ್ಪರ್ಧೆಗೆ ನಿಂತಂತೆ ಒಬ್ಬೊಬ್ಬರೂ ಮಕ್ಕಳನ್ನು ಹುಟ್ಟಿಸುತ್ತಾ ಬಂದಿದ್ದು ತಾತ ಇದ್ದಿದ್ದರೆ ಖುಷಿ ಪಡುತ್ತಿದ್ದ. ತನಗೆ ಮೂರು, ನಚ್ಚ ಪೈಗೆ ನಾಲ್ಕು, ದೇವು ಪೈಗೆ ಎರಡು ದಾಟಿ ಮೂರನೆಯ ಹಂತ. ಶಿವಪ್ಪಯ್ಯನಿಗೆ ಎರಡು, ಉಪ್ಪಿನಂಗಡಿಯಲ್ಲಿರುವ ಸುಕ್ಕೊ ಪೈಗೂ, ಎರಡು ಸಾರಸ್ವತ ಹೆಂಗಸರು ಹನ್ನೆರಡು ಗರ್ಭಗಳನ್ನು ಧರಿಸುವ ತಾಖತ್ತು ಪಡೆದೇ ಬಂದವರಲ್ಲವೇ? ಮಳೆಗಾಲದ ಬಳಿಕ ಬರುವ ಹಬ್ಬ ಹುಣ್ಣಿಮೆಗಳ ಸಮಯ ವಿಶೇಷತಃ ಕೃಷ್ಣಾಷ್ಟಮಿ, ಚೌತಿ, ದೇವ ಶನಿವಾರ, ದೀಪಾವಳಿಗಳ ದಿನಗಳಲ್ಲಿ ತಮ್ಮಂದಿರೆಲ್ಲ ಹೆಂಡಿರು ಮಕ್ಕಳೊಡನೆ ಬಳ್ಳಂಬೀಡಿಗೆ ಬರುವುದು ಕ್ರಮ. ಗಲಗಲವೆನ್ನುವ ಸಂಭ್ರಮ. ಅಂಗಣದ ಮೇಲೆ ತೆಂಗಿನಗರಿಗಳನ್ನು ಹೆಣೆದು ಮೂಡಿದ ಚಾಪೆ ಹಾಕಿ ಮಂಟಪ ಏಳುತ್ತಿತ್ತು. ವರ್ಷಕ್ಕೊಮ್ಮೆಯಾದರೂ ಆ ದಿನಗಳಲ್ಲಿ ರಾಮಚಂದ್ರ ಪೈ ಕುಂಬಳೆಯಲ್ಲಿ ದಿನಾ ಅಭ್ಯಾಸಮಾಡುತ್ತಿದ್ದ ತರುಣರನ್ನು ಬರಮಾಡಿಸಿ ಯಕ್ಷಗಾನ ಬಯಲಾಟ ಆಡಿಸಿದರೂ ಆಡಿಸಿದನೇ. ಹಜಾರದ ಮೇಲಿನ ಉಯ್ಯಾಲೆ ಜೀಕಿ ಜೀಕಿ ಸಾಧ್ಯವಾದಷ್ಟು ಮೇಲೆರುತ್ತದೆ. ಅವನಿಗೆ ಆಗ ಅನ್ನಿಸುವುದು ಈಗ ತಾತ ವಿಟ್ಠು ಪೈ ಬದುಕಿರಬೇಕಿತ್ತು ಎಂದು ! [ಸ್ವಸಾ. ಪುಟ ೩೩೭]

ಹೀಗೆ ವೆರಣೆಯಲ್ಲಿ ತನ್ನ ಮುತ್ತಜ್ಜಂದಿರು ಸಮೃದ್ಧ ಜೀವನ ನಡೆಸಿದಂತೆ ತಾನೂ ಸಹ ಕಷ್ಟಪಟ್ಟು ರಾಮಚಂದ್ರ ಪೈ ಅದೇ ಜೀವನ ತನ್ನದಾಗಿಸಿಕೊಳ್ಳುತ್ತಾನೆ. ದೊಡ್ಡಪ್ಪ ನಾಗಪ್ಪಯ್ಯನ ಆಸೆಯಂತೆ ತನ್ನ ತಮ್ಮಂದಿರಿಗೂ ಕಾರ್ಯಾಡು, ಕೊಂಬ್ರಾಜೆಗಳಲ್ಲಿ ನೆಲೆಮಾಡಿಕೊಟ್ಟು ಸಂತೃಪ್ತಿಯಿಂದಿದ್ದ ರಾಮಚಂದ್ರ ಪೈ ತನ್ನ ಮಕ್ಕಳೇ ಶತ್ರುಗಳಾಗಿ ತನ್ನ ಕುಟುಂಬದ ವಿನಾಶಕ್ಕೆ ಕಾರಣರಾಗುತ್ತಾರೆಂದು ಕನಸಿನಲ್ಲೂ ಎಣಿಸಿರಲಿಲ್ಲ.

ರಾಮಚಂದ್ರ ಪೈಯ ಮೊದಲ ಮಗ ಅಂತುಪೈ ಕೆಲಸ ಕಾರ್ಯಗಳಲ್ಲಿ ಚುರುಕಿದ್ದು, ರಾಮಚಂದ್ರ ಪೈ ಅನಾರೋಗ್ಯದಿಂದ ನರಳಿದಾಗ ನೀರಿನ ಗುಟುಕೂ ಕುಡಿಯದೆ ಶುಶ್ರೂಷೆ ಮಾಡಿದವನು ಹೆಣ್ಣು ಮರುಳನಾದಾಗ ರಾಮಚಂದ್ರ ಪೈ ಚಿಂತೆಗೀಡಾಗುತ್ತಾನೆ. ಆತನಿಗೆ ಮದುವೆ ಮಾಡಿಸಿದರೂ ಹೆಣ್ಣಿನ ಹುಚ್ಚು ಬಿಡದೆ ಮಂಜ ಪೂಜಾರಿಯ ಮಗಳ ಸಾವಿಗೆ ಕಾರಣನಾದಾಗ ರಾಮಚಂದ್ರ ಪೈ ಮತ್ತಷ್ಟು ಕೊರಗುತ್ತಾನೆ. ಎರಡನೆಯ ಮಗ ತಿಮ್ಮಪ್ಪೈ ಹಠಮಾರಿಯಾಗಿದ್ದು ಮನೆಗೆ ಬಂದ ಚಿಕ್ಕಪ್ಪಂದಿರ ಜೊತೆ ಜಗಳ ತೆಗೆದು ಮನೆಬಿಟ್ಟು ಹೋಗಿ ಸರ್ಪದಿಂದ ಕಚ್ಚಿಸಿಕೊಂಡು ಸಾವಿಗೀಡಾಗುತ್ತಾನೆ. ಇದೆಲ್ಲಾ ತನ್ನ ವಂಶದ ಮೇಲಿದ್ದ ನಾಗನ ಶಾಪವಿರಬೇಕೆಂದು ಗೋವಿಂದ ಭಟ್ಟರ ಹತ್ತಿರ ಅಂಜನ ಹಾಕಿಸಿ ನಾಗಬಿಂಬವನ್ನು ಹುಡುಕಿಸಿ ಪ್ರತಿಷ್ಠಾಪನೆ ಮಾಡಿಸಿ ನಿತ್ಯವೂ ಪೂಜೆ ಮಾಡುತ್ತಾನೆ. ರಾಮಚಂದ್ರ ಪೈಯ ಕುಟುಂಬದ ಏಳಿಗೆಯನ್ನು ಕಂಡು ಕರುಬಿದ ಶಿವಪ್ಪಯ್ಯನ ಮಗ ಭುಜಂಗ ಪೈ ತನ್ನ ದ್ವೇಷ ಸಾಧಿಸಲು ಹೋಗಿ ತಾನೂ ಭೀಕರ

ಸಾವನ್ನಪ್ಪುವುದರ ಜೊತೆಗೆ ದೇವು ಪೈಯ ಮಗ ಮುಗ್ಧ ರಂಗಪೈಯ ಸಾವಿಗೂ ಕಾರಣನಾಗುತ್ತಾನೆ ಶಿವಪ್ಪಯ್ಯನ ಹೆಂಡತಿ ಕಾವೇರಮ್ಮ ಮಕ್ಕಳೊಂದಿಗೆ ಬಾವಿಗೆ ಹಾರಿ ಪ್ರಾಣಬಿಟ್ಟರೆ, ಜಾಹ್ನವಿ ಮನೆಗೆ ಬೆಂಕಿ ಹಚ್ಚಿಕೊಂಡು ಸುಟ್ಟುಹೋಗುತ್ತಾಳೆ. ಅಂತುಪೈ ನೇಣು ಹಾಕಿಕೊಳ್ಳುತ್ತಾನೆ. ಹೀಗೆ ರಾಮಚಂದ್ರ ಪೈ ಕಷ್ಟಪಟ್ಟು ನಿಲ್ಲಿಸಿದ ಕುಟುಂಬದ ಬುನಾದಿಯ ಒಂದೊಂದೇ ಕಲ್ಲು ಕಳಚಿಕೊಳ್ಳುತ್ತಾ ನೆಲಸಮವಾಗುತ್ತಾ ಹೋಗುತ್ತದೆ.

'ಸ್ವಪ್ನ ಸಾರಸ್ವತ'ದ ಈ ಸನ್ನಿವೇಶ ಎಚ್.ಎಲ್. ನಾಗೇಗೌಡರ 'ದೊಡ್ಡಮನೆ' ಕಾದಂಬರಿಯಲ್ಲಿ ಬರುವ ಇಂತಹದ್ದೇ ಸನ್ನಿವೇಶವನ್ನು ನೆನಪಿಗೆ ತರುತ್ತದೆ.

* 'ದೊಡ್ಡಮನೆಯ ಗೌಡರು ಧೀರೋಧಾತ್ತವ್ಯಕ್ತಿ, ತಂದೆಯ ಕಾಲದಿಂದ ಬೆಳೆದುಬಂದ ಆ ಮನೆಯನ್ನು ಮತ್ತಷ್ಟು ಬೆಳೆಸಿ ಸುತ್ತಲ ನಾಡಿಗೆ ಹೆಸರಾಗುವಂತೆ ಮಾಡುತ್ತಾರೆ. ದಾಯಾದಿ ಮತ್ಸರದ ಕಿಡಿ ದೊಡ್ಡಮನೆಗೆ ತಾಗದಂತೆ ಕೊನೆಯವರೆಗೂ ಹೋರಾಡುತ್ತಾರೆ. ಕೊನೆಗೆ ಆ ದಾಯಾದಿಯ ತಂಗಿಯ ಮಗಳು ಗೌಡರ ಕೊನೆಯ ತಮ್ಮನ ಕೈಹಿಡಿದು ದೊಡ್ಡ ಮನೆಗೆ ಬಂದದ್ದೇ ಒಡಕಿಗೆ ಕಾರಣವಾಗಿ ಸಣ್ಣ ಸಣ್ಣ ಮನೆಗಳಾಗಿ ಒಡೆಯುತ್ತದೆ.



"ಬಯಸಿದಂತೆ ಬಾಳು ಸಾಗಿದರೆ ಬಡವ ಬಲ್ಲಿದನಾದಾನು! ಬಲ್ಲಿದ ಭಗವಂತನೇ ಆದಾನು. ಆದರೆ ಬಾಳು ಹಾಗೆ ಸಾಗುವುದಿಲ್ಲ. ಹಾಗೆ ಸಾಗದೆ ಇರುವುದರಿಂದಲೇ ಮನುಷ್ಯ ಬಾಳಿನಲ್ಲಿ ಹೆಣಗಾಡಬೇಕಾಗುತ್ತದೆ. ಈ ಹೆಣಗಾಟವೇ ಬಾಳಿನ ರಹಸ್ಯ ಬದುಕಿನ ಸ್ವಾರಸ್ಯ. ಗೌಡರು ದೊಡ್ಡಮನೆಯನ್ನು ದೊಡ್ಡದಾಗಿಯೇ ಇರಿಸಬೇಕೆಂದು ಬಯಸಿದರು, ಹೆಣಗಾಡಿದರು ಕೊನೆಗೆ ಆ ಬಯಕೆ ಕೈಗೂಡದೆ ನಡೆದಂತೆ ನಡೆಯಲಿ ಎಂಬ ಮನೋಭಾವ ತಾಳಿದರು."

ತನ್ನ ಕಣ್ಣ ಮುಂದೆಯೇ ತನ್ನ ಕುಟುಂಬದವರನ್ನೆಲ್ಲಾ ಕಳೆದುಕೊಂಡ ರಾಮಚಂದ್ರ ಪೈ ಭ್ರಮೆಗೊಳಗಾಗುತ್ತಾನೆ. ಆತನ ಮನಸ್ಸಿನಲ್ಲಿ ವಿಟ್ಟುಪೈ ಬಂದಂತೆ, ನಾಗ್ಡೊ ಬೇತಾಳ ಉಪದೇಶ ಕೊಟ್ಟಂತೆ, ನಾಗಬಿಂಬದ ಪೂಜೆ ಮಾಡಿದಂತೆ ಹೀಗೆ ಪ್ರತಿಯೊಂದು ವಿಷಯವೂ ಸುಳಿದಾಡಲು ಪ್ರಾರಂಭಿಸಿ ಆತ ಎಚ್ಚರದಲ್ಲಿದ್ದಾನೋ ಪ್ರಜ್ಞೆ ತಪ್ಪಿದ್ದಾನೋ ಎಂಬುದೇ ತಿಳಿಯದಂತಾಗುತ್ತದೆ. ತನ್ನ ಕೊನೆಯ ಮಗ ಸಿದ್ದುಪೈಯ ಮಗನನ್ನು ಕಾಪಾಡಿಕೊಳ್ಳಲೇ ಬೇಕು, ಅವನನ್ನು ನಾಗ್ಡೊ ಬೇತಾಳನಿಗೆ ಒಪ್ಪಿಸಿ ತನ್ನ ವಂಶ ಮುಂದುವರೆಯುವಂತೆ ಮಾಡಲೇಬೇಕು ಎಂಬ ಛಲದಿಂದ ಜೀವ ಹಿಡಿದು ಕೊಂಡಿರುತ್ತಾನೆ. ಹೀಗೆ ಸಾವು-ಬದುಕಿನೊಡನೆ ಹೋರಾಡುತ್ತಾ ಅರೆ ಪ್ರಜ್ಞಾವಸ್ಥೆಯಲ್ಲಿದ್ದ ರಾಮಚಂದ್ರ ಪೈಯ ಎದುರು ನಾಗ್ಡೊ ಬೇತಾಳ ಪ್ರತ್ಯಕ್ಷನಾಗುತ್ತಾನೆ.

'ಎದುರಿಗೆ ನಾಗ್ಡೊ ಬೇತಾಳನ ಥಳ ಥಳ ಹೊಳೆಯುವ ಕಪ್ಪು ಮೂರ್ತಿ, ಕಾಲ ಬುಡದಲ್ಲಿ ನಿದ್ರೆ ಹೋದ ಸಿದ್ಧನ ವೆಂಕಟೇಶ, ರಾಮಚಂದ್ರ ಪೈಯ ಕಂಠ ಗದ್ಗದವಾಯಿತು.

---

* ಹೆಚ್.ಎಲ್. ನಾಗೇಗೌಡ ; ದೊಡ್ಡಮನೆ ೧೯೭೨ ಪುಟ ೫೬೮-೫೭೯

"ಗೋವಾದ ವೆರಣೆಯ ಮಹಾಲಸ ದೇವಿಯ ಕುಳಾವಿಯಾದ, ಕೌಂಶಗೋತ್ರದ ವಿಟ್ಠುಪೈ ಸಂತಾನದ ಮುಖ್ಯ ಕಾಂಡವಾಗಿ ನಾನಿದ್ದೇನೆ. ಒಂದೇ ಒಂದು ಚಿಗುರಾಗಿ ಈ ಸಿದ್ಧನ ವೆಂಕಟೇಶನಿದ್ದಾನೆ. ನಾನು ಸತ್ತರೆ ಈ ಚಿಗುರಿಗಾರು ದಿಕ್ಕು? ನಮ್ಮ ವಂಶಜರು ಗೋವೆ ಬಿಟ್ಟು ಬಂದ ಆ ಕಥೆಯನ್ನು ಇವನಿಗೆ ಯಾರು ಹೇಳುತ್ತಾರೆ? ಕಳೆದ ಏಳೆಂಟು ತಿಂಗಳುಗಳಿಂದ ಒಂದೆ ಸಮನೆ ನಿನ್ನ ದಾರಿ ನೋಡುತ್ತಿದ್ದೇನೆ. ನಿನ್ನ ಕೈಯಲ್ಲಿ ಇವನನ್ನು ಇಟ್ಟು ಪ್ರಾಣ ಬಿಡುತ್ತೇನೆ. ಮುಂದಣ ವಂಶಕ್ಕೆ ನೀನು ಕಾರಣನಾಗು, ಬೇಕಿದ್ದರೆ ಚಿವುಟಿ ಹಾಕು, ಇಲ್ಲವೇ ಇದನ್ನು ಬೆಳೆಸು, ನಾನು ಕೇಳುವುದಿಲ್ಲ" ಎಂದ ರಾಮಚಂದ್ರ ಪೈ. ನಾಗ್ಡೊ ಬೇತಾಳ ಹೇಳಿದ 'ಆಗಲೇ ಇವನಿಗೆ ಆಯುಷ್ಮಾನ್ ಭವ' ಅಂತ ಆಶೀರ್ವಾದ ಮಾಡಿದ್ದೇನೆ. ಕೇಳಿದ್ದೀಯಲ್ಲ? ನಾಗ್ಡೊ ಬೇತಾಳನ ಮಾತು ಹುಸಿಯಾಗುವುದಿಲ್ಲ" ಎಂದ. ರಾಮಚಂದ್ರ ಪೈಯ ಮನಸ್ಸು ಶಾಂತವಾಯಿತು. [ಸ್ವಸಾ. ಪುಟ ೪೬೬]

ರಾಮಚಂದ್ರ ಪೈ ಮತ್ತೇ ಮತ್ತೇ ತನ್ನ ಕುಟುಂಬದವರು ಪಟ್ಟ ಕಷ್ಟ ಶಾಪಗಳ ಹೊರೆ ಪ್ರತಿಯೊಂದನ್ನೂ ನಾಗ್ಡೊ ಬೇತಾಳನಿಗೆ ಹೇಳುತ್ತಾನೆ.

"ಈ ಸಿದ್ಧನ ವೆಂಕಟೇಶನಿಗೊಂದು ಬದುಕು ಕೊಡು, ದೀರ್ಘಾಯಸ್ಸು ಕೊಡು. ಅವನಿಗೊಂದು ಮುಂಜಿ ಮಾಡು, ಮದುವೆ ಮಾಡಿ ಕುಟುಂಬ ಮುಂದುವರಿಯುವಂತೆ ಮಾಡು. ನಮ್ಮ ಪೂರ್ವಜರು ಗೋವೆ ಬಿಟ್ಟು ಬಂದ ಆ ಗಾಥೆಯ ಅಕ್ಷರಕ್ಷರವನ್ನು ಅವನಿಗೆ ಹೇಳು" [ಸ್ವಸಾ. ಪುಟ ೪೬೮]

ರಾಮಚಂದ್ರ ಪೈಯಿಂದ ಮಗುವನ್ನು ಎತ್ತಿಕೊಂಡು ಧರ್ಮಸ್ಥಳಕ್ಕೆ ಕೊಂಡೊಯ್ಯುವುದಾಗಿ ನಾಗ್ಡೊ ಬೇತಾಳ ಆಶ್ವಾಸನೆ ನೀಡುತ್ತಾನೆ.

"ನಿನಗೆ ಚಿಂತೆ ಬೇಡ ರಾಮಚಂದ್ರ ಪೈ, ಸಿದ್ಧನ ವೆಂಕಟೇಶನ ವರ್ಗದವರಿಗೆ ಕಷ್ಟಕೋಟಲೆಗಳು ಬರುವುದಿಲ್ಲ. ಬಂದರೂ ಅದನ್ನು ನಿವಾರಿಸಿಕೊಳ್ಳಲು ಅನರಿಗೆ ಸಾಧ್ಯವಾಗುತ್ತದೆ. ನಾನು ಹೊರಟೆ. ಸೂರ್ಯ ಉದಯಿಸುವಾಗ ನಿನ್ನ ಪಾಲಿನ ಸೂರ್ಯ ಅಸ್ತಮಿಸುತ್ತಾನೆ. ಮುಂದಿನವರ ಚಿಂತೆಯಿಲ್ಲದೇ ನೀನು ಈ ದೇಹ ಬಿಟ್ಟು ಹೋಗು. ಮತ್ತೆಂದೂ ಇಲ್ಲಿಯ ಬಗ್ಗೆ ಯೋಚಿಸಬೇಡ. ನಿನಗಾಗಿ ಇನ್ನೊಂದು ಲೋಕದ ಬಾಗಿಲು ತೆರೆದಿದೆ. ಆ ಬಾಗಿಲಿನಾಚೆ ನಿನಗೆ ಎಲ್ಲವೂ ಕಾಣುತ್ತದೆ" [ಸ್ವಸಾ. ಪುಟ ೪೬೯]

ರಾಮಚಂದ್ರ ಪೈ ತನ್ನ ವಂಶೋದ್ಧಾರವಾಗುತ್ತದೆ ಎಂಬ ಸಂತೃಪ್ತಿಯಿಂದ ಕಣ್ಣು ಮುಚ್ಚುತ್ತಾನೆ. ಹೀಗೆ ರಾಮಚಂದ್ರ ಪೈಯಿಂದ ಪ್ರಾರಂಭವಾದ ಕಥೆ ಅವನೊಡನೆಯೇ ಮುಕ್ತಾಯಗೊಳ್ಳುತ್ತದೆ.

ಹೀಗೆ ಸಾರಸ್ವತ ಕುಟುಂಬದ ಒಂದು ವಂಶಗಾಥೆಯ ಕಥನ ವಿಟ್ಠುಪೈ ಹಾಗೂ ರಾಮಚಂದ್ರ ಪೈ ಪಾತ್ರಗಳ ಮೂಲಕ 'ಸ್ವಪ್ನ ಸಾರಸ್ವತ'ದಲ್ಲಿ ಹೇಳಲ್ಪಟ್ಟಿರುವುದನ್ನು ಕಾಣಬಹುದು.

## ನಾಗ್ಡೊ ಬೇತಾಳ

ಕಾದಂಬರಿಯ ಪ್ರಾರಂಭದಿಂದ ಕೊನೆಯವರೆಗೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕಂಡುಬರುವ ನಾಗ್ಡೊ ಬೇತಾಳನ ಪಾತ್ರ ವಿಶಿಷ್ಟ ರೀತಿಯಲ್ಲಿ ಚಿತ್ರಿತವಾಗಿದೆ. ಈ ಪಾತ್ರವನ್ನು ಸೃಷ್ಟಿಸಲು ಒಂದು ಜಾನಪದ ಕಥೆ ಪ್ರೇರಣೆಯಾಗಿದೆ ಎಂದು ಲೇಖಕರು ಹೇಳಿದ್ದಾರೆ. ನಾಗ್ಡೋ ಬೇತಾಳನ ಪಾತ್ರ ಮಾನವನ ರೂಪದಲ್ಲಿ ಮೂಡಿ ಬಂದಿದ್ದರೂ ಆತನಿಗೆ ವಯಸ್ಸಿನ ಮಿತಿಯಿಲ್ಲ, ಸ್ಥಳಗಳ ಪರಿಧಿಯಿಲ್ಲ. ಆತ ಸರ್ವಶಕ್ತ ಸರ್ವಾಂತರ್ಯಾಮಿ. ಭೂತ–ವರ್ತಮಾನ–ಭವಿಷ್ಯವನ್ನು ಬಲ್ಲ ಸರ್ವಜ್ಞನು. ಹೀಗೆ ವಿರಾಟ್‌ಸ್ವರೂಪದಲ್ಲಿ ಚಿತ್ರಿತವಾಗಿರುವ ನಾಗ್ಡೊ ಬೇತಾಳನ ಬಾಹ್ಯರೂಪವನ್ನೂ ಸಹ ಹಾಗೆಯೇ ವಿವರಿಸಲಾಗಿದೆ.

'ಬೇತಾಳನಿಗೆ ಉದ್ದುದ್ದ ಕೂದಲುಗಳು, ಕಪ್ಪನೆಯ ಮುಖ, ವಿಶಾಲಕಣ್ಣುಗಳು, ದಪ್ಪ ಮೂಗು, ಆ ಉದ್ದುದ್ದ ಕೂದಲುಗಳು ಕಪ್ಪಗೆ ಹರಡಿಕೊಂಡಿದ್ದವು. ಅವನ ಕಿವಿಗಳ ಮೇಲೆಯೂ ಕೂದಲುಗಳ ಉಂಗುರಗಳು. ಎದೆಯ ತನಕ ಬೆಳೆದ ಅವನ ಗುಂಗುರು ಗುಂಗುರು ಕಪ್ಪುಗಡ್ಡ ಗಾಳಿಗೆ ಓಲಾಡುತ್ತಿತ್ತು. ಕೆಳತುಟಿಯ ಬಳಿ ಮಾತ್ರ ಸ್ವಲ್ಪ ಬೆಳ್ಳಗೆ, ಕೊರಳಿಗೆ ರುದ್ರಾಕ್ಷಿ, ಬರಿಗಾಲಿಗೆ ಗೆಜ್ಜೆ, ಹಣೆಯ ಮೇಲೆ ವಿಭೂತಿ, ಯಾವಾಗಲೂ ತಾಂಬೂಲ ಜಗಿಯುತ್ತಿದ್ದುದರಿಂದ ಅವನ ನಾಲಗೆಯೂ ತುಟಿಗಳು ರಕ್ತಗೆಂಪಾಗಿರುತ್ತಿತ್ತಲ್ಲದೇ ಹಲ್ಲುಗಳೂ ಮಣಕುಗಟ್ಟಿದ್ದುವು. ಬೇತಾಳ ಸನ್ಯಾಸಿ ಯಾವ ವಸ್ತ್ರವನ್ನೂ ಉಡುತ್ತಿರಲಿಲ್ಲವಾದುದರಿಂದ ನಾಗ್ಡೊ (ನಗ್ನ) ಬೇತಾಳವೆಂದು ಹೆಸರೂ ಇತ್ತು' [ಸ್ವಸಾ. ಪುಟ ೧೬]

ನಾಗ್ಡೊ ಬೇತಾಳ ಸಾರಸ್ವತ ಸಮುದಾಯದ ಸಂರಕ್ಷಕನಾಗಿ, ಧರ್ಮರಕ್ಷಕನಾಗಿ ಆಗಾಗ ಜನರ ಮುಂದೆ ಪ್ರತ್ಯಕ್ಷನಾಗಿ ಮಾರ್ಗದರ್ಶನ ನೀಡುವುದರ ಜೊತೆಗೆ ಭವಿಷ್ಯವನ್ನು ನುಡಿಯುತ್ತಾನೆ. "ಮೂರು ನೂರು ವರುಷಗಳ ಹಿಂದೆ ನಿಮ್ಮ ಹಿರಿಯರನ್ನು ಕುಳ್ಳಿರಿಸಿ ಹೇಳಿದ್ದೆ – ಕಡಲಾಚೆಯ ಜನ ಬಂದು ಈ ದೇಶವನ್ನು ಆಳುತ್ತಾರೆ ಎಂದು. ಜೋಗಿಯ ಮಾತು ಎಂದು ನೀವು ಅಸಡ್ಡೆ ತೋರಿಸಿದಿರಿ. ಆದರೆ ಆ ದಿನಗಳು ಈಗ ಬಂದಿವೆ. ಕಷ್ಟಗಳು ಹಿಂಬಾಲಿಸುತ್ತವೆ. ದೇವರನ್ನು ಜನರು ಮರೆಯುತ್ತಾರೆ. ಮತಧರ್ಮಗಳಲ್ಲೂ ಪರದೇಶದವರನ್ನು ಹಿಂಬಾಲಿಸುತ್ತಾರೆ. ಊರು ಬಿಟ್ಟು ಊರಿಗೆ ಹೋಗುತ್ತಾರೆ. ಹೊಸ ಊರು ಕಟ್ಟುತ್ತಾರೆ, ಕೆಡವುತ್ತಾರೆ, ಮತ್ತೆ ಕಟ್ಟುತ್ತಾರೆ" [ಸ್ವಸಾ. ಪುಟ ೨೧] ಸಾವಿಯರನು ಗೋವೆಗೆ ಬಂದಿಳಿದಿರುವ ವಿಷಯವನ್ನೂ ನಾಗ್ಡೊ ಬೇತಾಳನೇ ತಿಳಿಸುತ್ತಾನೆ.

"ಹನ್ನೆರಡು ದಿನಗಳ ಹಿಂದೆ ಸನ್ಯಾಸಿಯೊಬ್ಬ ತೀಸ್‌ವಾಡಿಯ ಭೂಮಿಯ ಮೇಲೆ ಕಾಲಿಟ್ಟಿದ್ದಾನೆ. ಬಹಳ ಮೃದುವಾಗಿ ಮಾತನಾಡುತ್ತಾನೆ, ಅನೇಕರಿಗೆ ದಾರಿ ತೋರಿಸುವ ದೇವರಾಗುತ್ತಾನೆ". [ಸ್ವಸಾ. ಪುಟ ೨೧]

ನಾಗ್ಡೊ ಬೇತಾಳ ಮತಾಂತರವನ್ನು ಖಂಡಿಸುತ್ತಾನೆಯೇ ಹೊರತು ಕ್ರೈಸ್ತ ಧರ್ಮವನ್ನು ಹೀಯಾಳಿಸುವುದಿಲ್ಲ.

"ಅವರ ದೇವರೂ ನನಗೆ ಗೊತ್ತು, ಗ್ರಂಥಗಳನ್ನು ಬಲ್ಲೆ, ಲೋಟಲಿಗೆ ಬರುವ ಮೊದಲು ಹದಿಮೂರು ವರ್ಷಗಳ ಪರ್ಯಂತ ಅವರ ಧರ್ಮಕ್ಕೂ ನಮ್ಮ ಧರ್ಮಕ್ಕೂ ಏನು ಬದಲಾವಣೆ ಇದೆ ಎಂದು ಪರಿಶೀಲಿಸಿದೆ. ಈ ಜನರಿಗೆ ನಾನು ಯಾರೆಂದು ಗೊತ್ತಿಲ್ಲ. ಎದುರಿಗೆ ಬಂದಾಗಲು ಇವರು ನನ್ನ ಗುರುತು ಹಿಡಿಯುವುದಿಲ್ಲ. ನನ್ನ ಹೆಸರಿನಲ್ಲಿ ಗುಡಿ ಕಟ್ಟಿಸಿಲ್ಲವೆ ? ಈಗಲೂ ನನ್ನ ಹೆಸರಿನಲ್ಲಿ ಪೂಜೆ ಮಾಡುತ್ತಿಲ್ಲವೆ ? ನನ್ನನ್ನು ಸಂತನೆಂದು ಕರೆಯುತ್ತಿಲ್ಲವೆ ? ಹೋಗಿ ಕೇಳಿ ಅವರ ಜ್ಞಾನವೇತ್ತರನ್ನು ಪ್ರಶ್ನಿಸಿ ಹೆಸರನ್ನುಚ್ಚರಿಸುವುದರಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು ಅದು ದೇವರ ಇಚ್ಛೆ. ಅವನೇ ನಮಗೆ ಬೇರೆ ಬೇರೆ ಭಾಷೆಗಳನ್ನಿತ್ತವನು. [ಸ್ವಸಾ. ಪುಟ ೧೨೪]

ಹೀಗೆ ಎಲ್ಲಾ ಧರ್ಮಗಳೂ ಒಂದೇ, ಎಲ್ಲಾ ದೇವರುಗಳೂ ಒಂದೇ ಎಂದು ಉಪದೇಶಿಸುತ್ತಾನೆ.

"ಫರಂಗಿಯವರು ಬಲತ್ಕಾರ ಮಾಡಿ ಮತಾಂತರ ಮಾಡಬಹುದೆಂದು ತಿಳಿದರೆ ತಪ್ಪು. ಆ ಹೆದರಿಕೆ ನಮಗಿಲ್ಲ. ಅವರು ದೇವಸ್ಥಾನಗಳನ್ನು, ಮಠಗಳನ್ನು ನಾಶಮಾಡಿದಷ್ಟು ನಮ್ಮ ಧರ್ಮದ ಬಗ್ಗೆ ನಮಗೆ ಹೆಚ್ಚು ಆಸಕ್ತಿ ಮೂಡುತ್ತದೆ. ನಮಗೆ ಹೆದರಿಕೆ ಇರುವುದು ಅವರು ತೋರಿಸುವ ಆಮಿಷಗಳದ್ದು ಮಾತ್ರ. ಆಸೆ ತೋರಿದತ್ತ ಹಾರುವುದು ಜನರ ಸ್ವಭಾವ" [ಸ್ವಸಾ. ಪುಟ ೬೬]

ಮೊದ ಮೊದಲಿಗೆ ಒಂದು ಮುಂಡಾಸಿನ, ಒಂದು ಅಂಗಿಯ ಆಸೆಯಿಂದ ಮತಾಂತರಗೊಂಡವರ ಬಗ್ಗೆ ಹೀಗೆ ಹೇಳುತ್ತಾನೆ, ನಂತರ ಮತಾಂತರ ಮಾಡಲು ಕ್ರೌರ್ಯ ಬಳಸಿದ ಗೋಯೆಸ್‌ನ ಕೊಂದು ಬಿಡುತ್ತೇವೆಂದು ಜನರು ಹೇಳಿದಾಗ "ಜೀವಹತ್ಯೆ ನಿಷಿದ್ಧ ಅಲ್ಲವೇ, ಒಬ್ಬ ಗೋಯೆಸ್‌ನನ್ನು ಕೊಂದರೆ ಹತ್ತು ಗೊಯೇಸ್‌ರು ಹುಟ್ಟುತ್ತಾರೆ. ಸಂಕ್ವಾಳಿಯಲ್ಲಿ ಕೆಲವು ಮಾಸಗಳ ಹಿಂದೆ ಒಬ್ಬ ತರುಣನ ಹತ್ಯೆಯಾಯಿತು. ಈಗ ಅಲ್ಲಿಯ ಜನರ ಬದುಕು ಭೀಕರವಾಗಿದೆ. ಪ್ರಪಂಚದಲ್ಲಿ ಧರ್ಮಕ್ಕಾಗಿ ನಡೆದಷ್ಟು ರಕ್ತಪಾತ ಬೇರೆ ಯಾವ ಕಾರಣಕ್ಕೂ ನಡೆದಿಲ್ಲ" [ಸ್ವಸಾ. ಪುಟ ೬೬] ಎಂದು ಹೇಳಿ ಸಮಾಧಾನಪಡಿಸುತ್ತಾನೆ.

ಗೋಯೆಸ್ ವೆರಣೆಯಲ್ಲಿನ ದೇವಸ್ಥಾನಗಳನ್ನು ಕೆಡವುತ್ತಾ, ಧಡ್ಡನನ್ನು ಕೊಂದು, ಜನರನ್ನು ಸೆರೆಹಿಡಿದು ಚಿತ್ರಹಿಂಸೆ ಕೊಡಲು ಪ್ರಾರಂಭಿಸಿದಾಗ ನಾಗ್ಡೊ ಬೇತಾಳನೇ ವಿಟ್ಠುಪೈ ಕುಟುಂಬವೂ ಸೇರಿದಂತೆ ಸಾರಸ್ವತ ಬ್ರಾಹ್ಮಣರನ್ನು ಊರು ಬಿಟ್ಟು ದಕ್ಷಿಣಾಭಿಮುಖವಾಗಿ ಪ್ರಯಾಣಿಸಲು ಆಜ್ಞಾಪಿಸುತ್ತಾನೆ.

ಹೀಗೆ ಜನರು ಸಂಕಷ್ಟ ಪರಿಸ್ಥಿತಿಗಳಲ್ಲಿ ತೊಳಲಾಡುತ್ತಿದ್ದಾಗ ಪ್ರತ್ಯಕ್ಷವಾಗಿ ಮತ್ತೇ ಮಾಯವಾಗುವ ನಾಗ್ಡೊ ಬೇತಾಳ ಕಥೆಯ ಕೊನೆಯಲ್ಲಿ ಪ್ರತ್ಯಕ್ಷನಾಗಿ ರಾಮಚಂದ್ರ ಪೈಯ ಕುಟುಂಬದಲ್ಲಿ ಉಳಿದ ಒಂದೇ ಒಂದು ಗಂಡುಮಗುವನ್ನು ಸಂರಕ್ಷಿಸುವುದಾಗಿ ತನ್ನ ಸುಪರ್ದಿಗೆ ತೆಗೆದುಕೊಳ್ಳುವುದರೊಡನೆ ಕಥೆ ಮುಗಿಯುತ್ತದೆ.

ಹೀಗೆ ನಾಗ್ಡೊ ಬೇತಾಳ ಜನರ ಒಂದು ಧಾರ್ಮಿಕ ಪ್ರಜ್ಞೆಯ ಪ್ರತೀಕದಂತೆ ಮಾನವಾತೀತನಾಗಿ ಮೂಡಿಬಂದಿದ್ದಾನೆ.

**ಸಾವಿಯರ**

ಧರ್ಮಪ್ರಚಾರಕ್ಕೆಂದು ಗೋವೆಗೆ ಬಂದ ಸೇಂಟ್ ಕ್ಸೆವಿಯರ್ (Saint xavier) ಸಾವಿಯರನಾಗಿ 'ಸ್ವಪ್ನ ಸಾರಸ್ವತ'ದಲ್ಲಿ ಮೂಡಿ ಬಂದಿದ್ದಾನೆ. ಸ್ಥಳೀಯರಿಂದ "ಬಿಳಿಯ ಸನ್ಯಾಸಿ" ಎಂದು ಕರೆಯಿಸಿಕೊಳ್ಳುವ ಇವನು ಕ್ರೈಸ್ತ ಧರ್ಮಗುರುವಾಗಿದ್ದು ಪ್ರವಚನ ನೀಡುವುದರ ಜೊತೆ ವೈದ್ಯೋಪಚಾರವನ್ನೂ ಮಾಡುತ್ತಾನೆ. ಈತನ ಶಾಂತವಾದ ರೂಪವೇ ಜನರನ್ನು ಆಕರ್ಷಿಸುತ್ತದೆ.

'ಅಚ್ಚ ಬಿಳಿಯ ವರ್ಣದ ಆ ಸನ್ಯಾಸಿ ಜನರನ್ನು ತನ್ನ ಮತದ ಕಡೆಗೆ ಒಲಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದ. ತಲೆಯ ಮೇಲೆ ಬಿಳಿಯ ಮುಸುಕು ಹಾಕಿದಂತೆ ಕಾಣುತ್ತಿರುವ, ಸಾಕಷ್ಟು ವಯಸ್ಸಾದ, ಆದರೆ ತೆಳ್ಳಗಿನ ದೇಹದ, ಗಡ್ಡ ಮೀಸೆಗಳನ್ನು ಚೊಕ್ಕದಾಗಿ ಕತ್ತರಿಸಿದ ಆ ಸನ್ಯಾಸಿ, ಊರ ಹೊರಗಿನ ಒಂದು ಮರದ ಕೆಳಗೆ ವಾಸ ಹೂಡಿದಾಗ ಕಂಡ ಜನರು ನಾಗ್ಡೊ ಬೇತಾಳ ಹೇಳಿದ ವ್ಯಕ್ತಿ ಇವನೇ ಇರಬೇಕು ಎಂದು ಕೊಂಡರು. ಆ ವಿದೇಶೀ ಸನ್ಯಾಸಿಯನ್ನು ನೋಡಲು ಎಲ್ಲರೂ ಗುಂಪು ಗುಂಪಾಗಿ ಹೊರಟರು. ನಗೆ ಮೊಗದ ಮೇಲೆ ತೇಜಸ್ಸು, ಬರಿಗಾಲ ನಡಿಗೆ, ಲವಲವಿಕೆಯ ಚಟುವಟಿಕೆ, ಪಾದದ ತನಕ ಬರುವ ಉದ್ದವಾದ ನಿಲುವಂಗಿ, ಕೈಲೊಂದು ಚಿಕ್ಕ ಗಂಟೆ ಹಿಡಿದುಕೊಂಡು ಅಲ್ಲಾಡಿಸುತ್ತಾ ರಸ್ತೆಗಳ ಮೇಲೆ ಚಿಕ್ಕ ಚಿಕ್ಕ ಹೆಜ್ಜೆಗಳನ್ನಿಡುತ್ತಾ ಅವನು ನಡೆಯುತ್ತಿದ್ದ. ಸ್ಪಷ್ಟವಾದ ಮಾತು' [ಸ್ವಸಾ. ಪುಟ ೨೪]

"ಹೆಸರು ಸಾವಿರನಂತೆ; ಮಂತ್ರಿಸಿ ನೀರು ಕೊಡುತ್ತಾನಂತೆ; ರೋಗಿಗಳ ಮೈ ಸವರಿ ಗುಣ ಮಾಡುತ್ತಾನಂತೆ; ಮಕ್ಕಳಿಗೆ ದೀರ್ಘಯುಸ್ಸುಂಟಾಗಲಿ ಎಂದು ಹರಸುತ್ತಾನಂತೆ; ಬಹಳ ದೊಡ್ಡ ಸಂತನಂತೆ; ಯಾವಾಗಲೂ ದೇವರ ಹೆಸರಿನಲ್ಲಿ ಹಾಡುತ್ತಾ ಇರುತ್ತಾನಂತೆ" [ಸ್ವಸಾ. ಪುಟ ೨೫]

ಹೀಗೆ ಅಂತೆ-ಕಂತೆಗಳ ಊಹಾಪೋಹಗಳಿಂದ ಜನರೇ ಆ ಸನ್ಯಾಸಿಯ ಬಗ್ಗೆ ಹೆಚ್ಚು ಪ್ರಚಾರನೀಡುತ್ತಾರೆ.

ಮೊರ್ದೇಶಿ ರೋಗದ ಸೋಂಕಿನಿಂದ ಪ್ರತಿಯೊಂದು ಮನೆಯಲ್ಲೂ ಆತಂಕ ಹೆಚ್ಚಾದಾಗ ಸಾವಿಯರ ತನ್ನಲ್ಲಿ ಬಂದ ಜನರಿಗೆ ಚಿಕಿತ್ಸೆ ನೀಡುತ್ತಾನೆ. ಈ ನೆಪದಲ್ಲಿ ಆತನ

ಸಹಾಯಕರು ಹಲವಾರು ಜನರನ್ನು ಮತಾಂತರಗೊಳಿಸುವಲ್ಲಿ ಯಶಸ್ವಿಯೂ ಆಗುತ್ತಾರೆ. ಮಗುವಾಗಿದ್ದ ವಿಟ್ಟುಪೈ ಸಹ ಮೊರ್ದೇಶಿ ರೋಗದಿಂದ ಬಳಲಿದಾಗ ಅದಾಗಲೇ ಇಬ್ಬರು ಮಕ್ಕಳನ್ನು ಕಳೆದುಕೊಂಡಿದ್ದ ಮಾಳಪ್ಪಯ್ಯ ಮಗುವನ್ನು ಸಾವಿಯರನಲ್ಲಿಗೆ ಕರೆದೊಯ್ದು ಚಿಕಿತ್ಸೆ ಕೊಡಿಸುತ್ತಾರೆ. ಹೀಗೆ ಮತಪ್ರಚಾರದ ವಿಷಯದಲ್ಲಿ ಸಾವಿಯರನ ಪಾತ್ರ ಬಂದರೂ ನಂತರ ಮತಾಂತರದ ಸಮಯದಲ್ಲಿ ಕಾಣಿಸಿಕೊಳ್ಳುವುದಿಲ್ಲ.

ಹೀಗೆ ಬಣ್ಣ, ಆಕಾರ, ವೇಷ–ಭೂಷಣ, ನಡೆ–ನುಡಿಗಳಲ್ಲಿ ನಾಗ್ಡೊ ಬೇತಾಳ ಮತ್ತು ಸಾವಿಯರ ತದ್ವಿರುದ್ಧವಾಗಿದ್ದರೂ ಇಬ್ಬರೂ ತಮ್ಮ ತಮ್ಮ ಧರ್ಮರಕ್ಷಕರಾಗಿರುತ್ತಾರೆ. ಸಾರಸ್ವತ ಸಮುದಾಯಕ್ಕೆ ನಾಗ್ಡೊ ಬೇತಾಳ ಎಷ್ಟು ಪ್ರಮುಖನೋ ಪೋರ್ಚುಗೀಸರಿಗೆ ಸಾವಿಯರ ಅಷ್ಟೇ ಪ್ರಮುಖನಾಗಿರುತ್ತಾನೆ.

## ಧಡ್ಡ

ವಿಟ್ಠುಪೈನಿಗೆ ಹಲವಾರು ಹಿರಿಯ ಕಿರಿಯ ಪಾತ್ರಗಳ ಸಂಪರ್ಕವಿದ್ದರೂ ಆತನಿಗೆ ನಿಕಟವರ್ತಿಗಳಾಗಿ ಆಪ್ತಮಿತ್ರರಾಗುವುದು ಧಡ್ಡ ಮತ್ತು ಮರ್ತುಕಿಣಿ ಪಾತ್ರಗಳು ಮಾತ್ರ.

ಮಾಳಪ್ಪಯ್ಯ ರಾಧಾಬಾಯಿ ತಮ್ಮ ಮಕ್ಕಳು ಮಾಧೊಪೈ ಮತ್ತು ತೊಕ್ಕಪ್ಪಯ್ಯನನ್ನು ಕಳೆದುಕೊಂಡು ಮಗು ವಿಟ್ಠುಪೈಯನ್ನು ಮೊರ್ದೇಶಿ ರೋಗದಿಂದ ಉಳಿಸಿಕೊಳ್ಳಲು ಹೆಣಗಾಡುತ್ತಿದ್ದ ಸಮಯದಲ್ಲಿ ಮನೆಯ ಬಾಗಿಲಿನಲ್ಲಿ ಮಾತು ಬಾರದ, ಕಿವಿ ಕೇಳಿಸದ ಮಗುವೊಂದು ಸಿಗುತ್ತದೆ.

'ಮುಸ್ಸಂಜೆಯ ಹೊತ್ತು, ಹಜಾರದ ನೆಲದ ಮೇಲೆ ಯಾರೋ ಮಲಗಿದಂತಿತ್ತು. ಮಾಳಪ್ಪಯ್ಯ 'ಯಾರು' ಎಂದ. ದೀಪ ಹಚ್ಚಿ ನೋಡಿದರೆ ವಿಟ್ಟುಪೈಗಿಂತ ತುಸು ದೊಡ್ಡವನಾದ, ಬದುಕಿದ್ದರೆ ತೊಕ್ಕಪ್ಪಯ್ಯನಷ್ಟು ವಯಸ್ಸಾಗಿರಬಹುದಾದ ಒಂದು ಮಗು! ಬೆಳ್ಳನೆಯ ಮೈ ಬಣ್ಣ, ಬಟ್ಟ ಮುಖ, ಮೈಮೇಲೆ ಒಂದೂ ವಸ್ತ್ರವಿಲ್ಲದ ನಾಗ್ಡೊಬೇತಾಳ! ಹೊಟ್ಟೆ ಒಳಸರಿದಿದ್ದುದರಿಂದ ಉಪವಾಸ ಬಿದ್ದಿರಬೇಕೆಂದು ಮಾಳಪ್ಪಯ್ಯ ಊಹಿಸಿದ. ಮಗುವಿನ ಕೆನ್ನೆಯ ಮೇಲೆ ಕಣ್ಣೀರು ಒಣಗಿದ ಸ್ಪಷ್ಟ ಗುರುತು. ಬಹುಶಃ ಹಸಿವಿನಿಂದ ಅತ್ತು ಅತ್ತು ನಿದ್ದೆ ಹೋಗಿರಬೇಕು. "ಯಾರದಪ್ಪ ಈ ಮಗು?" ಎಂದು ರಾಧಾಬಾಯಿ ಉದ್ಗರಿಸಿದಳು. ಮಾಳಪ್ಪಯ್ಯ "ಯಾವುದೋ ಕೀಳುಜಾತಿಯ ಜನ ಮೈಮೇಲೆ ಜ್ಞಾನವಿಲ್ಲದೇ ಬಿಟ್ಟಿರಬೇಕು" ಎಂದು ಹೇಳಿ ಹಚ್ ಹಚ್ ಎಂದು ಎಬ್ಬಿಸಿ ಓಡಿಸುವ ಆತುರ ತೋರಿಸಿದ. "ಮಗು ಯಾರದ್ದಾದರೂ ಇರಲೊಲ್ಲದೇಕೆ? ಈ ಕತ್ತಲಲ್ಲಿ ಎಲ್ಲಿಗೆ ಹೋದೀತು? ಅವನನ್ನು ಹೆತ್ತವರು ಬಂದು ಕರೆದುಕೊಂಡು ಹೋದಾರು, ಸುಮ್ಮನಿರಿ" ಎಂದು ರಾಧಾಬಾಯಿ ಗಂಡನನ್ನು ತಡೆದಳು' [ಸ್ವಸಾ. ಪುಟ ೩೪]

ನಂತರ ಎಷ್ಟೇ ದಿನಗಳಾದರೂ ಆ ಮಗುವಿನ ವಾರಸುದಾರರು ಯಾರೂ ಬರದಾದಾಗ ಸತ್ತ ತೊಕ್ಕಪ್ಪಯ್ಯನೇ ತಿರುಗಿಬಂದನೆಂದು ಎಂದು ಕೊಳ್ಳುತ್ತಾ ರಾಧಾಬಾಯಿ ಆ ಮಗುವನ್ನು ಸ್ವಂತ ಮಗನಂತೆಯೇ ಸಾಕಿದಳು.

'ಧಡ್ಡ ಅಂತ ಅವನಿಗೆ ಮಾಳಪ್ಪಯ್ಯ ಹೆಸರಿಟ್ಟದ್ದು ಉದ್ದೇಶಪೂರ್ವಕವಾಗಿ ಅಲ್ಲ. ಮೂಗ ಕಿವುಡನಾಗಿ ಓಡಾಡುತ್ತಿದ್ದ ಅವನನ್ನು ಒಮ್ಮೆ ಧಡ್ಡ ಅಂತ ಕರೆದದ್ದು ಅದೇ ಊರ್ಜಿತವಾಗಿ ನಿಂತಿತು' [ಸ್ವಸಾ. ಪು ೩೬]

ವಿಟ್ಟು ಪೈನಿನಿಂತ ಮೂರು ನಾಲ್ಕು ವರ್ಷಗಳಷ್ಟು ದೊಡ್ಡವನಾದ ಧಡ್ಡ ವಿಟ್ಠುಪೈಯನ್ನು ಎತ್ತಿ ಆಡಿಸಿ ಬೆಳೆಸಿದುದಲ್ಲದೆ ನಂತರ ಆತನ ಜೀವಗೆಳೆಯನಾದ. ವಿಟ್ಠುಪೈ ಯಾವ ಕೆಲಸ ಮಾಡಿದರೂ ಧಡ್ಡ ಅವನ ಜೊತೆಗಿರಲೇಬೇಕು. ಮಾಳಪ್ಪಯ್ಯ – ರಾಧಾಬಾಯಿ ಕೂಡ ಈ ಈರ್ವರ ಮಧ್ಯೆ ಭೇದಮಾಡದೆ ಬೆಳೆಸಿದರು. ವಯಸ್ಸಿಗೆ ಮೀರಿ ಬೆಳೆದಿದ್ದ ಧಡ್ಡನಿಗೆ ಮಾಳಪ್ಪಯ್ಯ ಉಪನಯನವನ್ನು ಮಾಡಿಸುತ್ತಾರೆ.

'ಅವರಿಗೆ ಆಗಲೇ ಧಡ್ಡನಿಗೂ ಒಂದು ಜನಿವಾರ ಹಾಕುವ ಆಸೆ. ಆದರೆ ಕಿವಿಯೇ ಕೇಳದ ಅವನಿಗೆ ಗಾಯತ್ರಿಯ ಉಪದೇಶ ಮಾಡುವುದಾದರೂ ಹೇಗೆ? ಶ್ರಾವಣದಲ್ಲಿ ಬರುವ ನೂಲುಹುಣ್ಣಿಮೆಯ ಹಬ್ಬಕ್ಕೆ ಹಾಕಿದ ಜನಿವಾರವನ್ನು ಅವನು ತೆಗೆದೇ ಇರಲಿಲ್ಲ. ಚಪ್ಪರದೊಳಗಿನ ಓಡಾಟವೆಲ್ಲ ಅವನದೇ. ಅದನ್ನು ಕಂಡು ಮಾಳಪ್ಪಯ್ಯನವರಿಗೆ ತಡೆಯಲಾಗಲಿಲ್ಲ. ವಿಟ್ಠುಪೈಗಿಂತ ಅವನು ಹಿರಿಯ. ಮೊದಲು ಅವನಿಗೆ ಉಪನಯನವಾಗಬೇಕಿತ್ತು. ಅವನು ಹುಟ್ಟಿದ ತಿಥಿಯೂ ಅವರಿಗೆ ತಿಳಿಯದು. ಹಾಗಾಗಿ ಕ್ರಿಷ್ಣಶರ್ಮರು ಹೇಳಿದ ಒಂದು ದಿನದಲ್ಲಿ ಅವನಿಗೊಂದು ಹೊಸ ಜನಿವಾರ ಹಾಕಿ, ಕೇಳದ ಕಿವಿಯಲ್ಲಿ ಗಾಯತ್ರಿ ಹೇಳುವ ಶಾಸ್ತ್ರ ಮುಗಿಸಿದರು. [ಸ್ವಸಾ. ಪುಟ ೫೭]

ಪ್ರೌಢಾವಸ್ಥೆ ತಲುಪಿದ ವಿಟ್ಠುಪೈನಿಗೆ ಮದುವೆ ಮಾಡಬೇಕೆಂದು ಮಾಳಪ್ಪಯ್ಯ ಯೋಚಿಸುತ್ತಿರುವಾಗ ರಾಧಾಬಾಯಿ ಮೊದಲು ಧಡ್ಡನಿಗೆ ಮದುವೆ ಮಾಡಿಸಲು ಮುಂದಾಗುತ್ತಾಳೆ.

ನಂತರ ಮಾಳಪ್ಪಯ್ಯ ನಾಗ್ಡೊ ಬೇತಾಳನಲ್ಲಿ ಧಡ್ಡನ ಮದುವೆಯ ಪ್ರಸ್ತಾಪ ಮಾಡಿದಾಗ ಆತ ಧಡ್ಡನ ಮದುವೆ ಸಾಧ್ಯವಿಲ್ಲವೆಂದು ಹೇಳಿಬಿಡುತ್ತಾನೆ.

"ಅವನಿಗೆ ಮದುವೆ ಮಾಡಿಸುವುದಕ್ಕೆ ಸಾಧ್ಯವುಂಟೋ ನಿಮ್ಮಿಂದ?" ಎಂದು ವ್ಯಂಗ್ಯದ ಛಾಯೆ ಬೆರೆಸಿ ಕೇಳಿದ. ಮಾಳಪ್ಪಯ್ಯ ಮೌನಗೊಂಡರು. ಧಡ್ಡನಿಗೆ ಹುಡುಗಿ ಕೊಡಲು ಮುಂದೆ ಬರುವ ಜನರಿದ್ದರು. ದೊಡ್ಡ ರೀತಿಯಲ್ಲಿಲ್ಲದಿದ್ದರೂ ಒಂದು ಮದುವೆ ಮಾಡಿ ಹೆಣ್ಣು ಒದಗಿಸಬಹುದಿತ್ತು. ಆದರೆ ನಾಗ್ಡೊಬೇತಾಳನ ಈ ರೀತಿಯ ಪ್ರಶ್ನೆಯ ಅರ್ಥವೇನು? ಅವರಿಗೆ ದಿಗಿಲಾಯತು. "ಅವನು ಆಜನ್ಮ ಬ್ರಹ್ಮಚಾರಿಯೇ. ಆ

ಬಗ್ಗೆ ನೀವು ಇನ್ನು ಯೋಚಿಸುವುದು ಬೇಡ" ಎಂದು ಸ್ಪಷ್ಟವಾಗಿ ಹೇಳಿದ ನಾಗ್ಡೊ ಬೇತಾಳ [ಸ್ವಸಾ. ಪುಟ ೯೭]

ನಾಗ್ಡೊ ಬೇತಾಳನ ಭವಿಷ್ಯವಾಣಿ ಮುಂದೆ ಧಡ್ಡನ ಕೈಯಿಂದ ಒಂದು ಮಹತ್ಕಾರ್ಯ ನಡೆಯಲಿದೆ ಎಂಬ ಮುನ್ಸೂಚನೆಯನ್ನು ಕೊಡುತ್ತದೆ.

ಪೋರ್ಚುಗೀಸರು ಕಂಡ ಕಂಡ ದೇವಾಲಯಗಳನ್ನು ಕೆಡವುತ್ತಾ ದೇವರ ಮೂರ್ತಿಗಳನ್ನು ನದಿಗೆ ಎಸೆಯಲು ಪ್ರಾರಂಭಿಸಿ ವೆರಣೆಯ ಮಹಾಲಸದೇವಿಯ ದೇವಸ್ಥಾನಕ್ಕೂ ಮುತ್ತಿಗೆ ಹಾಕುತ್ತಾರೆ. ಆದರೆ ನಾಗ್ಡೊ ಬೇತಾಳ ಆದಾಗಲೇ ಯಾರಿಗೂ ತಿಳಿಯದಂತೆ ಧಡ್ಡನ ಮೂಲಕ ದೇವಿಯ ಮೂರ್ತಿಯನ್ನು ಸುರಕ್ಷಿತ ಸ್ಥಳಕ್ಕೆ ಸಾಗಿಸಿಬಿಟ್ಟಿರುತ್ತಾನೆ. ಈ ವಿಷಯವನ್ನರಿಯದ ವಿಟ್ಠುಪೈ ಧಡ್ಡನ ಮೇಲೆ ಸಿಟ್ಟಾಗಿ ಕೂಗಾಡುತ್ತಾನೆ. ಆದರೆ ಧಡ್ಡ ಬೇಸರಪಟ್ಟುಕೊಳ್ಳುವುದಿಲ್ಲ.

"ಎಲ್ಲಿಗೆ ಹೋಗಿದ್ದೆ ನೀನು?" ಎಂದು ಅವನ ಹೆಗಲನ್ನೆಳೆದು ಪ್ರಶ್ನಿಸಿದ ವಿಟ್ಠುಪೈ. ಧಡ್ಡ ಅವನಿಗುತ್ತರ ಕೊಡದೇ "ಮೊದಲು ಸ್ನಾನವಾಗಬೇಕು, ಏನಾದರೂ ಉಣ್ಣಲು ಇದೆಯೇ?" ಎಂದು ಕೇಳಿದ. ವಿಟ್ಠುಪೈಯ ಸಿಟ್ಟು ಮಸ್ತಕಕ್ಕೇರಿತು. ಸನ್ನೆಯ ಬದಲು ಸಶಬ್ಧವಾಗಿ ಅವನು ಧಡ್ಡನನ್ನು ಬಯ್ದ. "ನಿನಗೆ ಖುಷಿ ಕಂಡಾಗ ಉಣ್ಣಲು ಬಂದು ಕೇಳುವುದಕ್ಕೆ ಇದೇನು ಅಡುಗೂಲಜ್ಜಿ ಮನೆ ಅಂತ ತಿಳಿದುಕೊಂಡಿಯಾ? ಊರಿಗೆ ಬೆಂಕಿ ಬಿದ್ದಾಗ ನಿನ್ನ ಮೂರ್ತಿ ಎಲ್ಲಿ ಅಡಗಿತ್ತು?" ಮಾಳಪ್ಪಯ್ಯ "ವಿಟ್ಠೊ, ಅದನ್ನು ಆಮೇಲೆ ಕೇಳುವಿಯಂತೆ ಬಂದಿದ್ದಾನೆ, ಮೊದಲು ಸ್ನಾನ ಮಾಡಿ ಉಣ್ಣಲಿ, ಆಮೇಲೆ ನಿನ್ನ ಪ್ರಶ್ನೆಗೆ ಉತ್ತರ ಕೊಟ್ಟಾನು" ಎಂದರು. ವಿಟ್ಠುಪೈ ನಖಶಿಖಾಂತ ಉರಿದ "ಅವನಿಗೆ ಅನ್ನ ಹಾಕಿದವರ ಮೇಲೆ ಮ್ಹಾಳಶಿಮಾಂಯಿಯ ಆಣೆ ಇದೆ, ಹೊರಟು ಹೋಗಲೀ ಅವನು ಇಲ್ಲಿಂದ. ನನಗೆ ಮುಖ ತೋರಿಸುವುದು ಬೇಡಾ" ಎಂದು ಕಿರುಚಿದ.

ಧಡ್ಡನ ಮುಖದ ಮೇಲೆ ಅಚಾನಕವಾಗಿ ಮಂದಹಾಸ ಮೂಡಿತ್ತು! ಅವನು ಥಟ್ಟನೆ ವಿಟ್ಠುಪೈಯ ಕೈ ಹಿಡಿದೆಳೆದು "ಬಾ, ನಾಗ್ಡೊ ಬೇತಾಳನಲ್ಲಿಗೆ ಹೋಗುವ" ಎಂದು ಎಳೆದ. ವಿಟ್ಠುಪೈ ಪ್ರತಿಭಟಿಸಿದ. ಆದರೆ ಅದನ್ನು ಗಣಿಸದೇ ಧಡ್ಡ ಆ ಕತ್ತಲೆಯಲ್ಲಿ ವಿಟ್ಠುಪೈಯನ್ನು ದರದರ ಎಳೆದುಕೊಂಡೇ ಭಗವತಿಯ ದೇವಳದ ಹತ್ತಿರದ ಕುಟೀರಕ್ಕೆ ಹೋದ. [ಸ್ವಸಾ. ಪುಟ ೧೪೩]

ನಾಗ್ಡೊ ಬೇತಾಳ ಧಡ್ಡನನ್ನು ಆದರದಿಂದ ಬರಮಾಡಿಕೊಂಡು ವಿಟ್ಠುಪೈಗೆ ಧಡ್ಡನ ಹಿರಿಮೆಯ ಬಗ್ಗೆ ತಿಳಿಸುತ್ತಾನೆ.

"ಹೆದರಬೇಡ ವಿಟ್ಠುಪೈ, ಧಡ್ಡ ನಿನಗೊಬ್ಬನಿಗೆ ಸೇರಿದವನಲ್ಲ. ಇಡಿಯ ಸಾರಸ್ವತ ಸಮಾಜಕ್ಕೆ ಈಗ ಸೇರಿಹೋದ. ಮ್ಹಾಳಶಿಮಾಂಯಿಯ ವಿಗ್ರಹವನ್ನು ಒಬ್ಬನೇ ಹೆಗಲ ಮೇಲೆ ಹೊತ್ತು ಪ್ರಿಯೋಳಕ್ಕೆ ಒಯ್ದು ಸಂರಕ್ಷಿಸಿದ ಪುಣ್ಯ ಅವನದ್ದಾಗಿದೆ. ಅಲ್ಲಿ ಒಂದು

ಹೊಲೆಯರ ಕೇರಿಯಲ್ಲಿ ಇಟ್ಟು ಬಂದಿದ್ದಾನೆ. ಆ ಪುಣ್ಯ ನಿನಗೆ ಸಿಗಲಿಲ್ಲವಲ್ಲ ಅಂತ ನೀನೀಗ ಕರುಬಬೇಕಾಗಿದೆ ವಿಟ್ಠೊ" ನಾಗ್ದೊ ಬೇತಾಳ ವ್ಯಂಗ್ಯದ ಛಾಯೆ ಬೆರೆಸಿದ ಉಚ್ಚ ಸ್ವರದಲ್ಲಿ ಹೇಳಿದ [ಸ್ವಸಾ. ಪುಟ ೧೪೪]

ಪೋರ್ಚುಗೀಸರು ದೇವಿಯ ಮೂರ್ತಿಯನ್ನು ಕಾಣದೆ ರೊಚ್ಚಿಗೆದ್ದು ವಿಟ್ಠುಪೈಯೂ ಸೇರಿದಂತೆ ಊರಿನ ಗಂಡಸರನ್ನೆಲ್ಲ ಸೆರೆ ಹಿಡಿದು ಹಿಂಸೆಕೊಟ್ಟರು. ಚಿತ್ರಹಿಂಸೆಯನ್ನು ತಾಳಲಾರದ ವಿಟ್ಠುಪೈ ಕೊನೆಗೆ ಧಡ್ಡನ ಹೆಸರನ್ನು ಹೇಳಿಬಿಡುತ್ತಾನೆ. ನಂತರ ಧಡ್ಡ ಪೋರ್ಚುಗೀಸರಿಂದ ಭೀಕರವಾಗಿ ಕೊಲಲ್ಪಡುತ್ತಾನೆ. ಹೀಗೆ ಧಡ್ಡ ಧರ್ಮರಕ್ಷಣೆಗಾಗಿ ಪ್ರಾಣತ್ಯಾಗ ಮಾಡಿ ದೈವದ ಪಟ್ಟಕ್ಕೇರುತ್ತಾನೆ.

ನಾಗ್ದೊಬೇತಾಳ ಏಳು ಕಡೆ ಧಡ್ಡನಿಗಾಗಿ ದೇವಸ್ಥಾನ ಕಟ್ಟಿಸುವುದಾಗಿ ಹೇಳಿ ಸಾರಸ್ವತರು ಆತನನ್ನು ದೇವರೆಂದೇ ಪೂಜಿಸಬೇಕಾಗಿ ಆಜ್ಞಾಪಿಸುತ್ತಾನೆ.

ಒಟ್ಟಿನಲ್ಲಿ ಕಾದಂಬರಿಯ ಮೊದಲನೇಯ ಅಧ್ಯಾಯಕ್ಕೆ ಸೀಮಿತವಾಗಿರುವ ಧಡ್ಡನ ಪಾತ್ರ ವಿಟ್ಠುಪೈ ಜೀವಂತವಿರುವವರೆಗೂ ಆತನನ್ನು ಕಾಡುತ್ತದೆ. ವಿಟ್ಠುಪೈಯ ಜೀವನದ ತಿರುವಿಗೆ ಕಾರಣವಾಗುವ ಧಡ್ಡನ ಪಾತ್ರ, ಒಂದೆಡೆ ವಿಟ್ಠುಪೈನಿಗೆ ನಾಗ್ದೊ ಬೇತಾಳನ ಪ್ರತಿಕೃತಿಯಂತೆ ಕಾಣುವ ಹಾಗೆ ಧರ್ಮರಕ್ಷಣೆಗಾಗಿ ತನ್ನ ಜೀವವನ್ನೇ ಬಲಿಕೊಟ್ಟು ಹುತಾತ್ಮನಾಗಿ ನಾಗ್ದೊ ಬೇತಾಳನ ಎತ್ತರಕ್ಕೇ ಏರಿರುವುದನ್ನು ಕಾಣಬಹುದು. ಹಾಗೆಯೇ ಕಥೆಯ ಪ್ರಧಾನ ಪಾತ್ರಗಳಲ್ಲೊಂದಾದ ವಿಟ್ಠುಪೈಯ ಜೀವನದ ಬದಲಾವಣೆಯಲ್ಲಿ ಧಡ್ಡ ಮಹತ್ತರ ಪಾತ್ರವಹಿಸಿದ್ದಾನೆ.

## ಮರ್ತುಕಿಣಿ

ವಿಟ್ಠುಪೈ ಗೋವೆಯಿಂದ ವಲಸೆ ಹೊರಟ ಕೆಲವು ದಿನಗಳಲ್ಲಿ ಮರ್ತುಕಿಣಿಯ ಭೇಟಿಯಾಗುತ್ತದೆ. ಆತನೂ ಸಹ ಪೋರ್ಚುಗೀಸರಿಂದ ತಪ್ಪಿಸಿಕೊಂಡು ನಾಲ್ಕು ಕುಟುಂಬಗಳ ಜೊತೆಗೆ ಬೇರೆ ದಿಕ್ಕಿನಿಂದ ಹೊರಟಿರುತ್ತಾನೆ.

'ಗುಂಪಿನ ಹಿರಿಯವ ಧಡಿಯ ಮಾಂಸಲವಾದ ಬೆಳ್ಳಗಿನ ಮೈ, ಅಡ್ಡಕ್ಕೆ ತಕ್ಕ ಉದ್ದ ಕಚ್ಚೆಯುಟ್ಟು, ಜುಟ್ಟು ಹಾಕಿ ಅರಳೆಯ ಜನಿವಾರ ಧರಿಸಿದ್ದ, ಹೆಸರು ಮರ್ತುಕಿಣಿ. "ನಿಮ್ಮ ಜೊತೆಯೇ ಬರುತ್ತೇವೆ. ನಮ್ಮ ಸಂಸಾರ ನಾವು ಸಾಕುವ ತನಕ ಉಣ್ಣಲು ಹಾಕಿ. ನಿಮ್ಮ ಮಕ್ಕಳು ಬಿಸಾಡುವ ಎಂಜಲಾದರೂ ಆದೀತು. ಜೀವ ಉಳಿಸಿಕೊಟ್ಟರೆ ನಿಮ್ಮನ್ನು ನಾವು ಎಂದಿಗೂ ಮರೆಯುವುದಿಲ್ಲ" ಎಂದು ಅವರೆಲ್ಲರ ಪರವಾಗಿ ಮರ್ತುಕಿಣಿ ಗೋಳಿಟ್ಟ ವಿಟ್ಠುಪೈಗೆ ಕೆಟ್ಟುದೆನಿಸಿತು' [ಸ್ವಸಾ. ಪುಟ ೧೬೩]

ವಿಟ್ಠುಪೈ ಮರ್ತುಕಿಣಿಯನ್ನು ತನ್ನ ಗುಂಪಿಗೆ ಸೇರಿಸಿಕೊಳ್ಳುತ್ತಾನೆ. ನಂತರ ಆತ ಗಂಗಾಬಾಯಿಯ ತಮ್ಮನೆಂದು ತಿಳಿದಾಗ ವಿಟ್ಠುಪೈಗೆ ಮತ್ತಷ್ಟು ಸಂತೋಷಗೊಳ್ಳುತ್ತಾನೆ.

ಗಂಗಾಬಾಯಿ ಮಹಾಲಸ ದೇವಸ್ಥಾನದ ಪೂಜಾರಿ ರಂಗಶರ್ಮರ ಸೊಸೆಯಾಗಿದ್ದು, ವಿಟ್ಠೂಪೈಯ ಮನೆಗೆ ಬಂದು ಆಗ್ಗಾಗ್ಗೆ ಮನೆಕೆಲಸ ಮಾಡಿ ಕೊಡುತ್ತಿರುತ್ತಾಳೆ. ಪೋರ್ಚುಗೀಸರ ಆಕ್ರಮಣದ ವಿಷಯ ಕೇಳಿ ಬಾವಿಗೆ ಬಿದ್ದು ಪ್ರಾಣಬಿಡುತ್ತಾಳೆ. ಈ ವಿಷಯವನ್ನು ಮರ್ತುಕಿಣಿಗೆ ತಿಳಿಸಿದಾಗ ಆತ ತಾವು ಪರಸ್ಪರ ಭೇಟಿಯಾದದ್ದು ಯೋಗಾಯೋಗದಿಂದಲೇ ಎಂದು ಸಮಾಧಾನಗೊಳ್ಳುತ್ತಾನೆ. ಮರ್ತುಕಿಣಿ ವಿಟ್ಠುಪೈನಿಗಿಂತ ಹಿರಿಯನಾಗಿದ್ದರೂ ಕೆಲವೇ ದಿನಗಳಲ್ಲಿ ಆತನಿಗೆ ಹತ್ತಿರವಾಗಿಬಿಡುತ್ತಾನೆ. ವಿಟ್ಠುಪೈಗೆ ಜ್ವರ ಬಂದಾಗ ಆತನ ಶುಶ್ರೂಷೆಯನ್ನು ಮಾಡುವ ಮರ್ತುಕಿಣಿ, ಗುಂಪಿನ ಕೆಲಸಗಳನ್ನು ಒಬ್ಬೊಬ್ಬರಿಗೆ ಹಂಚಿಕೊಟ್ಟು ವಿಟ್ಠೂಪೈಯ ಹೊರೆ ಕಡಿಮೆಯಾಗಿಸುತ್ತಾನೆ. ಅಂದಿನಿಂದ ಎಲ್ಲೇ ಹೋಗಲಿ ಆತ ವಿಟ್ಠುಪೈಯ ಜೊತೆಗಿದ್ದು ಸಹಾಯಮಾಡುತ್ತಾನೆ. ಇರುವ ಅಡಿಗೆ ಪದಾರ್ಥಗಳಲ್ಲೇ ರುಚಿಯಾಗಿ ಅಡಿಗೆ ಮಾಡಿ ಬಡಿಸುವುದು, ನಾಲಿಗೆ ಬಲದಿಂದ ಪದಾರ್ಥಗಳನ್ನು ಗಿಟ್ಟಿಸಿಕೊಳ್ಳುವುದು, ಇಂತಹ ಚಾಣಾಕ್ಷ್ಯತನ ಆತನಲ್ಲಿರುತ್ತದೆ. ವಿಟ್ಠೂಪೈಗಂತೂ ತನ್ನ ಜೀವದ ಗೆಳೆಯ ಧಡ್ಡನೇ ಕಷ್ಟಕಾಲದಲ್ಲಿ ತನಗೆ ಸಹಾಯ ಮಾಡಲು ಮರಳಿಬಂದಂತಾಗುತ್ತದೆ.

ಗುಂಪಿನಲ್ಲಿ ಸಾವು-ನೋವುಗಳ ಜೊತೆಗೆ ಜಗಳಗಳೂ ಪ್ರಾರಂಭವಾಗಿ ಎಲ್ಲರ ನೆಮ್ಮದಿ ಕೆಡುತ್ತದೆ. ನಾಗೇಶ ಹೆಗಡೆ ಮರ್ತುಕಿಣಿ ತನ್ನ ಮಗಳ ಮೈ ಮೇಲೆ ಕೈ ಮಾಡಿದನೆಂದರೆ, ಮಾಧೋ ಪೋರೋಬುವಿನ ಹೆಂಡತಿ ತನ್ನ ಒಡವೆ ಕಳ್ಳತನವಾಯಿತೆಂದು ಆರೋಪಿಸುತ್ತಾಳೆ. ಆದರೆ ವಿಟ್ಠುಪೈ ಕೈ ಚೆಲ್ಲಿ ಕುಳಿತಾಗ ಆತನನ್ನು ಮತುರ್ಕಿಣಿ ಸಮಾಧಾನಗೊಳಿಸುತ್ತಾನೆ.

ಆ ರಾತ್ರಿ ಮರ್ತುಕಿಣಿಯೊಡನೆ ಮಾತಾಡುತ್ತಾ ವಿಟ್ಠುಪೈ "ಇದನ್ನೆಲ್ಲ ಅನುಭವಿಸಲು ನಾವು ಗೋವೆ ಬಿಡಬೇಕಾಯಿತೇ ಕಿಣಿ ಮಾಮ್? ಕಿರಿಸ್ತಾನರಾಗುವುದಕ್ಕೆ ಒಪ್ಪಿಕೊಂಡಿದ್ದರೆ ನಾವು ಇವೆಲ್ಲ ಕಾಣುವ ದೌರ್ಭಾಗ್ಯ ಇರುತ್ತಿರಲಿಲ್ಲ. ಒಬ್ಬ ಹುಚ್ಚ, ಒಬ್ಬ ಕಳ್ಳ ಅವಳ ಒಡವೆ ಇಲ್ಲ, ಇವಳ ಮಗು ಇಲ್ಲ. ಉಳಿಸಿಕೊಳ್ಳಲು ತಲೆಯ ಮೇಲೆ ಸೂರು ಇಲ್ಲ, ಸತ್ತರ ದಿಕ್ಕಿಲ್ಲ, ನಾಳೆಯ ಸ್ಥಿತಿ ಏನೆಂದು ಗೊತ್ತಿಲ್ಲ, ದೇವರು ಸಂಪೂರ್ಣ ಕೈಬಿಟ್ಟ ಸಂತಾನ ನಾವು" ಎಂದು ದುಃಖದಿಂದ ಹೇಳಿದ.

ಮರ್ತುಕಿಣಿ "ವಿಟ್ಠೊ ವಯಸ್ಸಿನಲ್ಲಿ ಹಿರಿಯನೆಂದು ಅಧಿಕಾರ ಪಡೆದು ಒಂದು ಮಾತು ಹೇಳುತ್ತೇನೆ. ಇಲ್ಲದಿದ್ದರೆ ನನಗೆ ಮಾತಾಡಲು ಬಾಯಿ ಇಲ್ಲ. ಒಂದು ಲೆಕ್ಕದಲ್ಲಿ ನಿನ್ನಲ್ಲಿಗೆ ಅನ್ನ ಹಾಕು ಎಂದು ಬೇಡಿ ಬಂದ ಭಿಕ್ಷುಕ ನಾನು. ನಿನಗೆ ಹೇಳುವುದೆಂದರೆ ಅದು ಉದ್ಧಟತನವೆ! ಬದುಕು ದುರ್ಭರವಾದರೂ ಧರ್ಮಕ್ಕಾಗಿ ದೇವರಿಗಾಗಿ ಊರು ಬಿಟ್ಟವರು ನಾವು. ಅದು ಪುಣ್ಯದ ಕೆಲಸ ಎಂದಾದರೆ ಈ ಕಷ್ಟಗಳನ್ನು ನಾವು ಮರೆಯಬೇಕು. ಮುಂದೆ ಒಳ್ಳೆಯ ದಿನಗಳು ಬಂದೇ ಬರುತ್ತವೆ. ಎಂಬ ಆಸೆ ಇರಬೇಕು. ನಿನ್ನ ಬಾಯಿಂದ ಈ ಮಾತುಗಳು ಬರಬಹುದೆಂದು ನಾನು ನಿರೀಕ್ಷಿಸಿರಲಿಲ್ಲ.

ಪೋರ್ಚುಗೀಸರ ಈ ಪ್ರದೇಶದಿಂದ ಒಮ್ಮೆ ಹೊರಬೀಳುವ, ಎಲ್ಲಿ ಬೀಳುತ್ತೇವೋ ಅಲ್ಲಿ ಮೊಳಕೆ ಬರೋಣ, ಸಾರಸ್ವತ ಕುಟುಂಬಗಳು ಮುಂದೆ ಒಳ್ಳೆಯ ದಿನಗಳನ್ನೇ ಕಾಣುತ್ತವೆ" ಎಂದ. [ಸ್ವಸಾ. ಪುಟ ೧೭೫]

ಹೀಗೆ ಸಾಂತ್ವನ ನುಡಿಗಳನ್ನಾಡಿ ಮರ್ತುಕಿಣಿ ವಿಟ್ಠುಂ ಪೈನಲ್ಲಿ ಆತ್ಮವಿಶ್ವಾಸ ತುಂಬುತ್ತಾನೆ. ಹಾಗೆಯೇ ಗುಂಪನ್ನು ಹತೋಟಿಯಲ್ಲಿಡಲು ಒಬ್ಬ ನಾಯಕತ್ವವಹಿಸ ಬೇಕು, ಅದು ವಿಟ್ಠುಪೈನಿಂದಲೇ ಸಾಧ್ಯ ಎನ್ನುತ್ತಾನೆ. "ನೀನೇನೂ ಮಾಡಬೇಡ, ಮಾಡುವುದಕ್ಕೆ ಟೊಂಕಕಟ್ಟಿ ನಾವಿದ್ದೇವೆ. ಆದರೆ ಹುಲಿ ಗುರ್ರ್ ಎನ್ನಲೇಬೇಕು ಇಲ್ಲದಿದ್ದರೆ ಅದಕ್ಕೆ ಬೆಕ್ಕಿನ ಪಾಡು ಬರುತ್ತದೆ. ನಲ್ವತ್ತೆಂಟು ಕುಟುಂಬಗಳಿರುವ ಈ ಗುಂಪು ಕೊಚ್ಚಿಯ ತನಕ ಮುಟ್ಟಬೇಕೆಂದಿದ್ದರೆ ನಮಗೊಬ್ಬ ಮುಂದಾಳು ಬೇಕು. ಅದು ನೀನು" ಎಂದು ಮಾತು ಮುಗಿಸಿದ ಮರ್ತುಕಿಣಿ. [ಸ್ವಸಾ. ಪುಟ ೧೭೬]

ಕ್ಲಿಷ್ಟ ಪರಿಸ್ಥಿತಿಯಲ್ಲಿ ತನ್ನ 'ನಾಲಿಗೆಯ ಬಲ'ವನ್ನು ಉಪಯೋಗಿಸಿ ಪಾರಾಗುವುದರಲ್ಲೂ ಸಹಾಯಗಿಟ್ಟಿಸಿಕೊಳ್ಳವುದರಲ್ಲಿ, ಕೈಯಲ್ಲಿ ಹಣವಿಲ್ಲದಿದ್ದರೂ ವ್ಯಾಪಾರ ಕುದುರಿಸುವುದರಲ್ಲೂ ಮರ್ತುಕಿಣಿ ನಿಷ್ಣಾತನಾಗಿರುತ್ತಾನೆ.

"ಒಂದು ಸೌದೆಯ ತುಂಡು ಕೊಡು ವಿಟ್ಠೂ, ಅದನ್ನೇ ಬಂಡವಾಳ ಮಾಡಿ ವ್ಯಾಪಾರ ಮಾಡುವುದನ್ನು ನಮಗೆ ಯಾರೂ ಹೇಳಿಕೊಡಬೇಕಾಗಿಲ್ಲ" [ಸ್ವಸಾ. ಪುಟ ೧೮೩]

ಹೀಗೆ ಕುಂಬಳೆ ತಲುಪುವವರೆಗೆ ದಾರಿಯುದ್ದಕ್ಕೂ ವಿಟ್ಠುಪೈಯನ್ನು ಸಮಾಧಾನಪಡಿಸುತ್ತಾ ನಗಿಸುತ್ತಾ ಜೊತೆ ಜೊತೆಯಾಗಿದ್ದ 'ಮರ್ತುಕಿಣಿ ಕುಂಬಳೆಗೆ ಕಾಲಿಟ್ಟದ್ದೆ ಜ್ವರ ಬಂದು ಮಲಗಿಬಿಡುತ್ತಾನೆ. ವಿಟ್ಠುಪೈ ಎಷ್ಟೇ ಶುಶ್ರೂಷೆ ಮಾಡಿದರೂ ಫಲಕಾರಿಯಾಗದೆ ಮರ್ತುಕಿಣಿ ತನ್ನ ಕುಟುಂಬದ ಜವಾಬ್ದಾರಿಯನ್ನು ವಿಟ್ಠುಪೈಗೆ ವಹಿಸಿ ಕೊನೆಯುಸಿರೆಳೆದಾಗ ವಿಟ್ಠುಪೈಗೆ ಆಕಾಶವೇ ತಲೆಯ ಮೇಲೆ ಕಳಚಿಬಿದ್ದಂತಾಗುತ್ತದೆ. ಮತ್ತೊಮ್ಮೆ ತನ್ನ ಜೀವದ ಗೆಳೆಯನನ್ನು ಕಳೆದುಕೊಂಡು ಪರಿತಪಿಸುವಂತಾಗುತ್ತದೆ.

ಹೀಗೆ ಧಡ್ಡ ಮತ್ತು ಮರ್ತುಕಿಣಿ ವಿಟ್ಠುಪೈಯ ಆಪ್ತರಾಗಿದ್ದು ಆತನ ಕಷ್ಟ-ಸುಖಗಳನ್ನು ಹಂಚಿಕೊಂಡು ಆತನ ನಿಕಟವರ್ತಿಗಳಾಗಿರುತ್ತಾರೆ. ಧಡ್ಡನ ಕೊರತೆಯನ್ನು ತುಂಬಿದ್ದ ಮರ್ತುಕಿಣಿಯನ್ನು ಕಳೆದುಕೊಂಡ ವಿಟ್ಠುಪೈಗೆ ಅನಾಥ ಭಾವನೆ ಕಾಡುತ್ತದೆ. ಮಂಗಳೂರಿನಲ್ಲಿ ಕಳ್ಳನಿಗೆ ಯದ್ವಾ ತದ್ವಾ ಹೊಡೆಯುತ್ತಿದ್ದ ಮರ್ತುಕಿಣಿಯನ್ನು ತಾನು ನೂಕಿದ್ದೆ ಆತನ ಸಾವಿಗೆ ಕಾರಣವಾಯಿತೇ ಎಂದು ವಿಟ್ಠುಪೈ ಪರಿತಪಿಸುತ್ತಾನೆ. ಧಡ್ಡ ಹಾಗೂ ಮರ್ತುಕಿಣಿಯ ನೆನಪು ಆತನನ್ನು ಜೀವನ ಪರ್ಯಂತಕಾಡುತ್ತದೆ.

## ತಿಮ್ಮಪ್ಪೈ

ತಿಮ್ಮಪ್ಪೈ ರಾಮಚಂದ್ರ ಪೈಯ ಎರಡನೇಯ ಮಗ. ಈ ಪಾತ್ರ ಚಿಕ್ಕದಾಗಿ ಮೂಡಿ ಬಂದಿದ್ದರೂ ರಾಮಚಂದ್ರ ಪೈಯ ಬದುಕಿನ ನೆಮ್ಮದಿಯನ್ನು ಕೆಡಿಸಿ ಕುಟುಂಬ ಇಬ್ಭಾಗವಾಗಲು ಕಾರಣವಾಗಿ ಪ್ರಾಮುಖ್ಯತೆ ಪಡೆದಿದೆ. ಬಾಲ್ಯದಿಂದಲೇ ಹಠಮಾರಿಯಾಗಿ ಬೆಳೆದ ತಿಮ್ಮಪ್ಪೈ ಬೇರೆಯವರ ಮಾತಿರಲಿ, ತಂದೆಯ ಮಾತನ್ನೇ ಕೇಳುತ್ತಿರಲಿಲ್ಲ. ಆತನ ಸ್ವಭಾವವು ಕಾದಂಬರಿಯಲ್ಲಿ ಈ ರೀತಿಯಾಗಿ ಚಿತ್ರಿತವಾಗಿದೆ.

'ರಾಮಚಂದ್ರ ಪೈಯ ಮೂರು ಮಕ್ಕಳಲ್ಲಿ ಹಠವಾದಿಯಾಗಿ ಬೆಳೆದವನು ಎರಡನೆಯ ಮಗ ತಿಮ್ಮಪ್ಪೈ. ಹದಿಮೂರನೆಯ ವಯಸ್ಸಿನಲ್ಲಿಯೇ ಮನೆತನದ ಎಲ್ಲ ಕೆಲಸಗಳನ್ನೂ ಕೈಗೆ ತೆಗೆದುಕೊಂಡ ತಿಮ್ಮಪ್ಪೈಗೆ ತಾನು ಹೇಳಿದ್ದೇ ಆಗಬೇಕು. ತನಗೆ ಅನ್ನಿಸಿದ್ದೇ ನಡೆಯಬೇಕು. ತೀರ ಚಿಕ್ಕಂದಿನಿಂದಲೂ ಹಾಗೆಯೇ ಅವನು ಹಿರಿಯರ ಬೈಗಳಿಗೆ ಹೊಡೆತಗಳಿಗೆ ಆತ ಬಗ್ಗುವವನಲ್ಲ. ರಾಮಚಂದ್ರ ಪೈ ಕೈಯಲ್ಲಿ ಬಡಿಗೆ ಹಿಡಿದು ಕೆಲವು ಬಾರಿ ಅವನನ್ನು ಶಿಕ್ಷಿಸಿದ್ದಿತ್ತು. ಬೆನ್ನಿನ ಮೇಲೆ ಬಾಸುಂಡೆ ಬರುವಂತೆ ಹೊಡೆದರೂ ಆತ ಕೇಳಲೊಲ್ಲ. ನಡುಮನೆ ಭೂತದ ಕೋಲ ದಿವಸ ರಾತ್ರಿ ಇಡೀ ಜಾಗರಣೆ ಕುಳಿತಾನು. ಪೆರಡಾಲದ ಪಡವಿನಲ್ಲಿ ಬಯಲಾಟವಿದೆ ಅಂದರೆ ಆಳು ಮಕ್ಕಳನ್ನು ಜೊತೆ ಕಟ್ಟಿ ಮಡಲಿನ ಸೂಟಿ ಹಿಡಿದು ಹೊರಟಾನು. "ಇಲ್ಲಿ ಕೆಲಸವಿದೆಯೆಂದು ಆ ಹಡಬೆಗೆ ಧ್ಯಾನ ಇದೆಯೋ ಇಲ್ಲವೋ ಮಂಗ ಕುಣಿಯುವ ಆ ಬಯಲಾಟದವನ್ನು ನೋಡಲು ಇವನಿಗೆ ಹೋಗಬೇಕಿತ್ತೇ?" ಅಂತ ರಾಮಚಂದ್ರ ಪೈ ಬೈದರೆ ಅವನ ಕಿವಿಗೆ ಬೀಳಲಾರದು. ಬೆದರಂ ಪಳ್ಳದ ಕೋಳಿ ಕಟ್ಟಕ್ಕೆ ನಾಡವರ ಮಕ್ಕಳೊಡನೆ ಹೋದರೂ ಹೋದನೇ ಅಂತ ರಾಮಚಂದ್ರ ಪೈಗೆ ಅನುಮಾನವಿತ್ತು. ಅವನು ಯೋಚಿಸುವುದೆಂದರೆ ಈ ಹುಡುಗ ಇಷ್ಟೊಂದು ಹಠವಾದಿ ಹೇಗಾದ ಎಂದು ! [ಸ್ವಸಾ. ಪುಟ ೩೬೩]

ತಿಮ್ಮಪ್ಪೈಗೆ ಹೆಣ್ಣುಮರುಳನಾಗಿದ್ದ ತನ್ನ ಅಣ್ಣ ಅಂತುಪೈಯನ್ನು ಕಂಡರಾಗುತ್ತಿರಲಿಲ್ಲ. ಆದರೆ ಅಂತುಪೈಯ ಹೆಂಡತಿ ರುಕ್ಮಿಣಿಯ ತಂಗಿ ಜಾಹ್ನವಿಯನ್ನು ಕಂಡಾಗಿನಿಂದ ಆಕೆಯನ್ನೇ ಮದುವೆಯಾಗುವುದೆಂದು ತೀರ್ಮಾನಿಸಿ ಬಿಡುತ್ತಾನೆ. ಒಂದೇ ಮನೆಯಿಂದ ಅಕ್ಕ–ತಂಗಿಯರನ್ನು ಅಣ್ಣ ತಮ್ಮಂದಿರಿಗೆ ಮದುವೆ ಮಾಡಿಸುವುದು ಬೇಡ ಎಂದು ರಾಮಚಂದ್ರಪ್ಪೈ ಹಾಗು ಜಾಹ್ನವಿಯ ತಂದೆ ಮಂಗಲಪಾಡಿ ಅನಂತಯ್ಯನವರು ವಿರೋಧಿಸಿದರೂ ಕೇಳದೆ ತನ್ನ ಹಠ ಸಾಧಿಸಲು ಮುಂದಾಗುತ್ತಾನೆ. ನೀಚ ಜಾತಿಯ ಹಿರಿಯ ಮಂಕು ನಡೆಸುವ ವಿಷ್ಣು ಮೂರ್ತಿಯ ತಂಬಿಲಕ್ಕೆ ಪ್ರಶ್ನೆ ಕೇಳಲು ಹೋಗುತ್ತಾನೆ. ಈ ವಿಷಯ ರಾಮಚಂದ್ರ ಪೈಗೆ ತಿಳಿದಾಗ ಮಗನ ಮೇಲೆ ರೇಗಾಡುತ್ತಾನೆ.

"ಹೊಲೆಯರು ಗಿಲೆಯರು ಅಂತ ಇಲ್ಲ ಬ್ರಾಹ್ಮಣನಾಗಿ ಭೂತದ ಎದುರು ತಲೆಬಾಗುತ್ತೀಯಾ? ಅಂಥ ಪ್ರಶ್ನೆ ಏನಿದೆ ನಿನಗೆ? ಸಾರ್ಥಕವಾಯಿತು ನಿನ್ನ ಜನ್ಮ. ಹೋಗು ಆ ಹೊಲೆಯರ ಹಾಗೆ ದಟ್ಟಿಗೆ ಕಟ್ಟಿ ಹೊಲತಿಯೊಬ್ಬಳನ್ನು ಕಟ್ಟಿಕೊಂಡು ಇರು. ಆ ಜನಿವಾರ ತೆಗೆದು ಬೀಸಾಡು ನೀನು ನನಗೆ ಹುಟ್ಟಿದ ಮಗನಲ್ಲ ಎಂದು ತಿಳಿದುಕೊಳ್ಳುತ್ತೇನೆ" ಅಂತ ಕಿರುಚಾಡಿದ ರಾಮಚಂದ್ರಪ್ಪೈ.

"ಅಗತ್ಯ ಬಿದ್ದರೆ ಅದಕ್ಕೂ ಸಿದ್ಧ ನಾನು. ನಿನಗೆ ಹೆದರಿ ಕುಳಿತುಕೊಳ್ಳುತ್ತೇನೆಂದು ತಿಳಿಯಬೇಡ. ನನ್ನ ಆಸ್ತಿಯ ಪಾಲು ಕೊಟ್ಟು ಬಿಡು. ಬೇರೆಯೇ ಒಂದು ಮನೆ ಕಟ್ಟಿಕೊಂಡಿರುತ್ತೇನೆ" ಎಂದು ಬಿಟ್ಟ ತಿಮ್ಮಪ್ಪೈ. [ಸ್ವಸಾ. ಪುಟ ೩೬೫]

ಹೀಗೆ ತಿಮ್ಮಪ್ಪೈ ತನ್ನ ಹಠಸಾಧಿಸಲು ಯಾವ ಅತಿರೇಕಕ್ಕೂ ಹೋಗುತ್ತಿದ್ದ ಹಾಗೂ ಯಾರನ್ನು ಬೇಕಾದರೂ ಎದುರುಹಾಕಿಕೊಳ್ಳುತ್ತಿದ್ದ.

ಯಾರು ಎಷ್ಟೇ ಹೇಳಿದರೂ ಕೇಳದ ತಿಮ್ಮಪ್ಪೈ ಜಾಹ್ನವಿಯ ಜೊತೆ ಆದಷ್ಟು ಬೇಗ ಮದುವೆ ಮಾಡಿಸಲೇ ಬೇಕೆಂದು ಜಿದ್ದು ಮಾಡುತ್ತಾನೆ.

"ಅಂದರೆ ನೀನು ಅವಳ ಜೊತೆ ನನ್ನ ಮದುವೆ ಮಾಡುವವನಲ್ಲ ಅಲ್ಲವೇ? ನೀನು ಮದುವೆ ಮಾಡಿಸದಿದ್ದರೆ ಆ ಹುಡುಗಿಯನ್ನು ನಾನು ಹಾರಿಸಿಕೊಂಡು ಬರುವವ, ತಿಳಿಯಿತೆ?" ಎಂದು ಕೂಗಾಡಿದ. ರಾಮಚಂದ್ರ ಪೈ ದಿಕ್ಕುಗಾಣದೇ ಪರಿತಪಿಸಿದ. ಮಾತಾಡಿದರೆ ಈ ಹುಡುಗ ತಾನು ಹೇಳಿದ್ದನ್ನು ಮಾಡಿಯೇ ಬಿಡುವವನು ಎಂದು ಹೆದರಿ ಮೌನವಾಗಿ ಕುಳಿತ. "ಹಾಗೂ, ಆ ಹುಡುಗಿಯನ್ನು ಮದುವೆಯಾಗಿ ಈ ಮನೆಯಲ್ಲಿ ವಾಸ ಮಾಡುವವನಲ್ಲ ನಾನು, ಅದೂ ತಿಳಿದುಕೋ, ಬೇರೆ ಮನೆ ಮಾಡಿಕೊಳ್ಳುತ್ತೇನೆ. ನಿನ್ನ ಜ್ಯೇಷ್ಠ ಪುತ್ರನ ಕಚ್ಚೆ ಹರುಕತನದಿಂದ ನನ್ನ ಹೆಂಡತಿಯನ್ನು ಸಂಭಾಳಿಸಿಕೊಳ್ಳಬೇಕೆಂದಿದ್ದರೆ ಅದೇ ಗತಿ ನನಗೆ. ಅವನಿಗೆ ಸೀರಿ ಉಟ್ಟದ್ದು ಕಂಡರೆ ಸಾಮಾನು ಏಳುತ್ತದೆ" ಎಂದೂ ಹೇಳಿದ. ರಾಮಚಂದ್ರಪ್ಪೈಗೆ ಅತೀವ ಸಂಕಟವಾಯಿತು. "ಹಾಗೆ ಮಾಡಬೇಡವೋ" ಎಂದು ರಾಮಚಂದ್ರಪ್ಪೈ ಕಂಗಾಲಾಗಿ ಅಂಗಲಾಚುವಂತಾಯಿತು. "ಮತ್ತೇನು? ನಾನು ಇಲ್ಲಿ ಇರುತ್ತೇನೆ ಅಂತ ತಿಳಿದುಕೊಂಡಿದ್ದೀಯಾ? ಆ ಹೆಣ್ಣುಮರುಳನ ಜೊತೆ ಸಂಸಾರ ಮಾಡುವವನಲ್ಲ ನಾನು. ಒಂದು ದಿನ ನಾನು ಇಲ್ಲದಿದ್ದರೆ ನನ್ನ ಹೆಣ್ಣನ್ನು ಹಾಳು ಮಾಡಲು ಹೇಸುವವನಲ್ಲ ಅವನು" ಎಂದು ಚೀರಾಡಿದ ತಿಮ್ಮಪ್ಪೈ. ರಾಮಚಂದ್ರಪ್ಪೈ ಹಣೆ ಹಣೆ ಬಡಿದುಕೊಂಡ. [ಸ್ವಸಾ. ಪುಟ ೩೬೮]

ಮಗನ ಹಠಕ್ಕೆ ಮಣಿಯಲೇ ಬೇಕಾದ ರಾಮಚಂದ್ರಪ್ಪೈ ಅನಂತಯ್ಯನವರಲ್ಲಿ ಹೋಗಿ ಜಾಹ್ನವಿಯ ಜಾತಕ ಕೇಳುತ್ತಾನೆ. ಅನಂತಯ್ಯನವರು ಮದುವೆಗೆ ಒಪ್ಪದೆ ಜಾತಕವನ್ನು ಕೊಡಲು ನಿರಾಕರಿಸುತ್ತಾರೆ. ಆದರೆ ಜಾಹ್ನವಿ ತಿಮ್ಮಪ್ಪೈ ಗುಟ್ಟಾಗಿ ಬಂದು

ಹೇಳಿಕೊಟ್ಟಂತೆಯೇ ತಿಮ್ಮಪ್ಪೈಯನ್ನೇ ಮದುವೆಯಾಗುವುದೆಂದು ಹಠ ಹಿಡಿದು ಉಪವಾಸ ಕುಳಿತಾಗ ಅನಂತಯ್ಯನವರೂ ಒಪ್ಪಲೇ ಬೇಕಾಗುತ್ತದೆ. ಅವರ ಕರ್ಮ ಇದ್ದ ಹಾಗೆ ಆಗುತ್ತದೆ ಎಂದು ಹಿರಿಯರು ತಿಮ್ಮಪ್ಪೈ-ಜಾಹ್ನವಿಯರ ಮದುವೆ ಮಾಡಿಸುತ್ತಾರೆ. ಹೇಗೋ ಮದುವೆಯ ನಂತರ ತಿಮ್ಮಪ್ಪೈ ಬೇರೆಮನೆ ಮಾಡುವ ವಿಷಯ ಎತ್ತದಿದ್ದಾಗ ರಾಮಚಂದ್ರಪ್ಪೈ ಸಮಾಧಾನದ ನಿಟ್ಟುಸಿರಿಡುತ್ತಾರೆ. ಆದರೆ ಕೆಲವೇ ದಿನಗಳಲ್ಲಿ ತಮ್ಮ ಕುಟುಂಬದ ಬುನಾದಿಯನ್ನೇ ಅಲ್ಲಾಡಿಸುವ ದುರ್ಘಟನೆಯೊಂದು ನಡೆಯುತ್ತದೆ ಎಂದು ಅವರು ಊಹಿಸಿರಲಿಲ್ಲ.

ರಾಮಚಂದ್ರಪ್ಪೈಯ ದೊಡ್ಡಪ್ಪ ನಾಗಪ್ಪಯ್ಯನ ಶ್ರಾದ್ಧಕ್ಕೆ ಆತನ ಚಿಕ್ಕಪ್ಪನ ಮಕ್ಕಳು ಶಿವಪ್ಪಯ್ಯ ಮತ್ತು ದೇವು ಪೈ ಸಂಸಾರ ಸಮೇತ ಬಳಂಬೆಟ್ಟಿಗೆ ಬಂದಿರುತ್ತಾರೆ. ಆ ವರ್ಷ ಸರಿಯಾದ ಮಳೆಯಾಗದೆ ಕಾರ್ಯಾಡಿನಲ್ಲಿ ಅಕ್ಕಿಯನ್ನು ಬೆಳೆಯಲಾಗದ್ದರಿಂದ ಆ ಈರ್ವರೂ ರಾಮಚಂದ್ರಪ್ಪೈಯ ಮನೆಯಿಂದ ಅಕ್ಕಿಮುಡಿಯನ್ನು ತೆಗೆದುಕೊಂಡು ಹೋಗುತ್ತಿರುವಂತೆಯೇ ತಿಮ್ಮಪ್ಪೈ ಅವರನ್ನು ತಡೆಯುತ್ತಾನೆ.

"ಇವರ ಹೊಟ್ಟೆ ತುಂಬಿಸಿ ನಾವು ಕೆಟ್ಟುಹೋದೆವು. ದುಡಿಯಲಿಕ್ಕೆ ನಾವು, ತಿನ್ನಲಿಕ್ಕೆ ಇವರು. ಬೇರೆಯವರ ಮನೆಯಿಂದ ಎತ್ತಿಕೊಂಡೊಯ್ಯುವುದಕ್ಕೂ ಒಂದು ಮಿತಿ ಇರಬೇಕು" ಎಂಬ ಮಾತು ಬಂತು. ಆ ಮಾತು ಶಿವಪ್ಪಯ್ಯನ ಕಿವಿಗೂ ಬಿತ್ತು. ಅವನು ದನಿ ಎತ್ತರಿಸಿ "ಏನು ಹಾಗೆಂದರೆ?" ಎಂದು ಕೇಳಿದ. "ಇನ್ನೇನು? ನಾವು ದುಡಿಯುವುದು ಇನ್ನೊಬ್ಬರ ಹೊಟ್ಟೆ ತುಂಬಿಸಲಿಕ್ಕಲ್ಲ" ಎಂದು ಖಾರವಾಗಿಯೇ ಹೇಳಿದ ತಿಮ್ಮಪ್ಪೈ. ತನ್ನ ಕಣ್ಣೆದುರಿನ ಹುಡುಗ ಇಷ್ಟು ಉದ್ದ ಮಾತನಾಡುವುದು ಶಿವಪ್ಪಯ್ಯನಿಂದ ಸಹಿಸಲಾಗಲಿಲ್ಲ. "ಏನು? ನಾಲಗೆಗೆ ಎಲುಬು ಇಲ್ಲವೆಂದು ಬೇಕಾದ ಹಾಗೆ ಸಡಿಲು ಬಿಟ್ಟಿದ್ದೀಯ? ನಾವೇನು ಭಿಕ್ಷಕ್ಕೆ ಬಿದ್ದವರು ಅಂತ ತಿಳಿದಿದ್ದೀಯ?" ಎಂದ. ತಿಮ್ಮ ಪೈ ಮಾತಾಡಲು ಆರಂಭಿಸಿದರೆ ಹಿಂದೆ ಮುಂದೆ ನೋಡುವವನಲ್ಲ. "ಭಿಕ್ಷೆ ಅಲ್ಲದೆ ಇನ್ನೇನು? ನಿಮಗಿರಲಿ ಅಂತ ಕಾರ್ಯಾಡು, ಕೊಂಬ್ರಾಜೆಗಳ ಆಸ್ತಿ ಮಾಡಿಕೊಟ್ಟಿದ್ದೇವೆ, ಬೇಕಾದ್ದು ಬೆಳೆಯುಬಹುದಲ್ಲ? ಇಲ್ಲಿಗೆ ಬಂದು ಕೈ ಚಾಚುವುದಕ್ಕೆ ನಾಚಿಕೆಯಾಗುವುದಿಲ್ಲವೇ?" ಎಂದ. ಶಿವಪ್ಪಯ್ಯನ ಸಿಟ್ಟೂ ಮಸ್ತಕಕ್ಕೇರಿತು. [ಸ್ವಸಾ. ಪುಟ ೩೭೩-೩೭೪]

ಹೀಗೆ ಮಾತಿಗೆ ಮಾತು ಬೆಳೆದು ದೊಡ್ಡ ಜಗಳವೇ ಶುರುವಾಗಿಬಿಟ್ಟಿತು. ರಾಮಚಂದ್ರಪ್ಪೈ ಮಗನನ್ನೂ, ಮಲತಮ್ಮಂದಿರನ್ನೂ ಸುಮ್ಮನಾಗಿಸಲು ಎಷ್ಟೇ ಹರಸಾಹಸ ಮಾಡಿದರೂ ಪ್ರಯೋಜನವಾಗದೆ ಜಗಳ ಮತ್ತಷ್ಟು ಬಿರುಸಾಯಿತು.

ಶಿವಪ್ಪಯ್ಯ ತಾನು ಇನ್ನೆಂದಿಗೂ ಆ ಮನೆಗೆ ಕಾಲಿಡುವುದಿಲ್ಲ ಎಂದು ಧರ್ಮಸ್ಥಳದ ಮಂಜುನಾಥನ ಆಣೆ ಹಾಕಿ ಹೊರಟಾಗ ದೇವಪ್ಪಯ್ಯನೂ ಹೊರಟುಬಿಡುತ್ತಾನೆ. ತಿಮ್ಮಪ್ಪೈಯ ಕೋಪ ಅದೇ ಸಮಯಕ್ಕೆ ಅಲ್ಲಿಗೆ ಬಂದ ಅಂತುಪ್ಪೈಯ ಮೇಲೆ

ತಿರುಗುತ್ತದೆ. "ರಾಮಚಂದ್ರ ಪೈ ಒಮ್ಮೆಲೇ ಗದ್ದೆಯಿಂದ ಅಂಗಣಕ್ಕೆ ಜಿಗಿಯುತ್ತಾ "ತಿಮ್ಮಪ್ಪಾ" ಎಂದು ಕಿರುಚಿದ. ಅವನ ತಲೆಯೊಳಗೆ ಈ ಹುಡುಗನೂ ಬಾಯಿಗೆ ಬಂದದ್ದು ಮಾತನಾಡುತ್ತಾ ಧರ್ಮಸ್ಥಳದ ಹೆಸರೆತ್ತಿ ಆಣೆ ಗೀಣೆ ಮಾಡಿದರೆ ಎಂಬ ಅನುಮಾನ ಹುಟ್ಟಿತ್ತು. ಹುಟ್ಟಿದ್ದೇ ಥರ ಥರ ನಡುಗುತ್ತಾ ಹೋಗಿ ತಿಮ್ಮಪೈಯ ಎದುರು ನಿಂತ. ತಿಮ್ಮಪೈ ಒಂದಿಷ್ಟು ಬೆದರದೇ ಅವನನ್ನೇ ದುರುಗುಟ್ಟಿ ನೋಡಿದ. ಇಡಿಯ ಮೈಯನ್ನು ಸವಾಲಾಗಿ ಮಾಡಿ ನಿಂತು "ಬೇಡ, ಬೇಡ, ನನ್ನನ್ನು ಕೆರಳಿಸಬೇಡ. ಒಂದೋ ಅವನಿರಬೇಕು, ಇಲ್ಲದಿದ್ದರೆ ನಾನಿರಬೇಕು. ಈ ಬಳ್ಳಂಬೆಟ್ಟಿನ ಮನೆಯಲ್ಲಿ ನಿನಗೆ ಬೇಡವೋ, ಇಗೋ ನಾನು ಹೊರಟೆ, ಇನ್ನೊಂದು ಕ್ಷಣ ನಾನು ಈ ಮನೆಯಲ್ಲಿ ಇರುವವನಲ್ಲ ನೀನೇ ನಿನ್ನ ತಮ್ಮಂದಿರನ್ನೂ ನಿನ್ನ ಈ ಹಿರಿಮಗನನ್ನೂ ಇಟ್ಟುಕೋ, ನಾನಿನ್ನು ಈ ಮನೆಯಲ್ಲಿ ಕಾಲಿಟ್ಟರೆ ............" [ಸ್ವಸಾ. ಪುಟ ೩೭೯]

ಕೋಪದಲ್ಲಿ ತಾನೇನು ಮಾಡುತ್ತಿದ್ದೇನೆ ಎಂಬ ಪರಿವೆಯೇ ಇಲ್ಲದ ತಿಮ್ಮಪೈ ಜಾಹ್ನವಿಯ ಕೈಹಿಡಿದು ಎಳೆಯುತ್ತಾ ಹೊರಗೆ ಬಂದನು. ಬಳ್ಳಂಬೆಟ್ಟಿನ ಮನೆಯ ಎಡಗಡೆಯಲ್ಲಿ ರಾಮಚಂದ್ರಪೈ ಮೊದಲು ವಾಸಿಸುತ್ತಿದ್ದ ಬಲ್ಲಾಳ ಬೀಡು ಹಳೆಯ ಮನೆಯತ್ತ ಧಾವಿಸಿದನು.

'ತಿಮ್ಮಪೈ ಬಲ್ಲಾಳ ಬೀಡಿನ ಮೆಟ್ಟಿಲು ಹತ್ತುವ ತನಕ ಜಾಹ್ನವಿಯ ರಟ್ಟೆಯನ್ನು ಬಿಡಲಿಲ್ಲ. ಮೆಟ್ಟಿಲು ಹತ್ತಿದವನೇ ಎದುರಿನ ಬಾಗಿಲು ನೂಕಿ ಒಳಗೆ ಕಾಲಿಟ್ಟ, ಆತನ ಹಿಂದೆಯೇ ಜಾಹ್ನವಿಯೂ ಒಳಗೆ ಕಾಲಿಟ್ಟಳು. ಒಳಗಿನ ಕತ್ತಲೆಯಲ್ಲಿ ಅವನೂ ಅವಳೂ ಮರೆಯಾಗುವುದನ್ನೇ ನೋಡುತ್ತಿದ್ದ ರಾಮಚಂದ್ರ ಪೈಯ ದೃಷ್ಟಿಯಲ್ಲಿ ಬೆಳಕೇ ಇರಲಿಲ್ಲ.

ಒಳಗೆ ಹೋದ ತಿಮ್ಮಪೈ ಮತ್ತು ಜಾಹ್ನವಿ ಒಂದು ಕ್ಷಣ ಒಳಗೆ ಇದ್ದರೋ ಇಲ್ಲವೋ ಜಾಹ್ನವಿ ಕಿಟಾರನೆ ಕಿರುಚುತ್ತಾ ಹೊರಗೋಡಿ ಬಂದಳು. ಇಡೀ ಬಳ್ಳಂಬೆಟ್ಟಿನ ಬಯಲಲ್ಲಿ ಅವಳು ಕಿರುಚಿದ್ದು, ಮಾರ್ದನಿಗೊಂಡಿತು. ಆಕೆ ಬಾಯಿ ಬಾಯಿ ಬಡಿಯುತ್ತಾ ಹೊರಗೆ ಬಂದು "ಯಾರಲ್ಲಿ..." ಎಂದು ಕೂಗಿ ಧೊಪ್ಪನೆ ಹಜಾರದ ಮೇಲೆ ಬಿದ್ದು ಬಿಟ್ಟಳು. ಶ್ರಾದ್ಧಕ್ಕೆ ಬಂದಿದ್ದ ಜನರೆಲ್ಲ ಅಷ್ಟು ಹೊತ್ತೂ ಬೊಂಬೆಗಳಂತೆ ನಿಂತವರು "ಅಯ್ಯೋ...." ಎಂದು ಕಿರುಚುತ್ತಾ ಅತ್ತ ಓಡಿದರು. ರಾಮಚಂದ್ರಪೈಯೂ ಓಡಿದ. ಒಳಗಿನ ಕತ್ತಲಲ್ಲಿ ಕೈಯಲ್ಲಿದ್ದ ಬಟ್ಟೆಯ ಗಂಟನ್ನು ನೆಲಕ್ಕೆ ಒಗೆದ ತಿಮ್ಮಪೈ ಏನನ್ನು ಮೆಟ್ಟಿದನೋ, ಸರ್ಪವೊಂದು ಕಟಕ್ಕನೇ ಅವನ ಕಾಲನ್ನು ಕಡಿದದ್ದು ನೋಡಿ "ಅಮ್ಮಾ" ಎಂದು ನೆಲಕ್ಕೆ ಒರಗಿದ್ದ. ಜಾಹ್ನವಿ ಏನು ಏನು ಎಂದು ಗಾಬರಿಗೊಂಡು ಕೇಳುವಷ್ಟರಲ್ಲಿ ನೆಲದ ಮೇಲೆ ಸರಸರ ಹರಿಯುವ ಹಾವು ಕಂಡು ಕಿಟಾರನೆ ಕಿರುಚಿ ಹೊರಗೆ ಧಾವಿಸಿ ಬಂದಿದ್ದಳು. ಬಳ್ಳಂಬೆಟ್ಟಿನ ಮನೆಯಿಂದ ಓಡಿ ಬಂದ ಜನರು ಶುಶ್ರೂಷೆ ಮಾಡುವಷ್ಟರಲ್ಲಿ ತಿಮ್ಮಪೈಯ ಉಸಿರುನಿಂತು ಹೋಗಿತ್ತು ! [ಸ್ವಸಾ. ಪುಟ ೩೮೦]

ಹೀಗೆ ತಿಮ್ಮಪ್ಪೈ ತನ್ನ ಹಠಮಾರಿತನಕ್ಕೆ ತಾನೇ ಬಲಿಯಾಗುವುದಲ್ಲದೆ ತಾನು ಪ್ರೇಮಿಸಿ ಮದುವೆಯಾದ ಜಾಹ್ನವಿಯ ಬಾಳನ್ನೂ ಸಹ ನರಕವಾಗಿಸುತ್ತಾನೆ. ಅಜ್ಜ ವಿಟ್ಟುಪೈಯ ಕನಸಿನಂತೆ ಬಳ್ಳಂಬೆಟ್ಟಿನಲ್ಲಿ ಗೋವೆಯ ವೆರಣೆಯನ್ನು ಸೃಷ್ಟಿಸಿ, ತಮ್ಮಂದಿರಿಗೂ ಒಂದು ನೆಲೆ ಮಾಡಿಕೊಟ್ಟು ನೆಮ್ಮದಿಯಿಂದಿದ್ದ ರಾಮಚಂದ್ರಪೈಯ ಕೌಟುಂಬಿಕ ಜೀವನದ ವಿನಾಶಕ್ಕೆ ತಿಮ್ಮಪ್ಪೈ ನಾಂದಿ ಹಾಡುತ್ತಾನೆ. ಇಲ್ಲಿಂದ ರಾಮಚಂದ್ರಪೈಯ ನೆಮ್ಮದಿ ಹಾಳಾಗಿ ಒಂದಿಲ್ಲೊಂದು ಅಹಿತಕರ ಘಟನೆಗಳು ನಡೆಯುತ್ತಾ ಹೋಗುತ್ತವೆ. ರಾಮಚಂದ್ರಪೈಯ ತಮ್ಮಂದಿರ ವಂಶವೂ ನಶಿಸುತ್ತದೆ.

ಹೀಗೆ ತಿಮ್ಮಪ್ಪೈಯ ಪಾತ್ರ ಚಿಕ್ಕದಾಗಿ ಮೂಡಿಬಂದರೂ ಅದರ ಪ್ರಭಾವ ಇತರ ಪಾತ್ರಗಳ ಮೇಲೂ ಬಿದ್ದು ಕಥೆಯ ಬೆಳವಣಿಗೆಯಲ್ಲಿ ಪ್ರಾಮುಖ್ಯತೆ ಪಡೆದಿದೆ.

### ಭುಜಂಗ ಪೈ

ಭುಜಂಗ ಪೈ ರಾಮಚಂದ್ರ ಪೈಯ ತಮ್ಮ ಶಿವಪ್ಪಯ್ಯನ ದೊಡ್ಡ ಮಗ. ಯಾವ ಕೆಲಸದ ಬಗ್ಗೆಯೂ ತಲೆಕೆಡಿಕೊಳ್ಳದೆ ಅಲ್ಲಲ್ಲಿ ಅಲೆಯುತ್ತಾ ಕಾಲ ಕಳೆಯುವ ಈ ಹುಡುಗ. ಬಾಲ್ಯದಿಂದಲೇ ರಾಮಚಂದ್ರ ಪೈಯ ಕುಟುಂಬದ ಏಳಿಗೆಯನ್ನು ಸಹಿಸಲಾರದೆ ದ್ವೇಷವನ್ನು ಬೆಳೆಸಿಕೊಂಡಿರುತ್ತಾನೆ.

'ಹನ್ನೆರಡು ದಾಟದ ಹುಡುಗನಾದರೂ ಒಂದಿಷ್ಟು ಬೇಜವಾಬ್ದಾರಿಯ ಹುಡುಗ. ಕೀಟಲೆ ಕಿಲಾಡಿತನಗಳನ್ನು ಮೈಗೂಡಿಸಿಕೊಂಡು ಉಳಿದವರನ್ನು ಗೋಳು ಹುಯ್ದುಕೊಳ್ಳುತ್ತಿದ್ದ. ದೊಡ್ಡಪ್ಪ ಕೊಂಬ್ರಾಜೆ ದೇವು ಪೈಯ ಮಗ ರಂಗಪ್ಪೈ ಅವನಿಗೆ ಒಂದು ಆಟದ ವಸ್ತು. ಗುತ್ತು ಗುರುವಾರ ಕಾರ್ಯಾಡು ಉಕ್ಕಿನಡ್ಕಗಳ ಗುಡ್ಡಗಳ ಮೇಲೆ ಅಲೆದಾಡುವಾಗ ಈ ರಂಗಪೈಯನ್ನು ಅವನು ಕೊಂಡೊಯ್ಯುವ ಕ್ರಯವಿತ್ತು. ಆಗೆಲ್ಲ ಅವನ ಪೆದ್ದುತನವನ್ನು ಉಪಯೋಗಿಸಿ ಖುಷಿ ಪಡುವುದು ಈ ಭುಜಂಗ ಪೈಯ ಕೆಲಸ. ದೂರದ ಕಾಡಿನಲ್ಲಿ ಅವನ ಕಣ್ಣು ತಪ್ಪಿಸಿ ಮರದ ಹಿಂದೆ ಅಡಗಿ ಕುಳಿತು ಆ ಪೆದ್ದ ದಾರಿ ಸಿಗದೇ ಪರದಾಡುವುದನ್ನು ಕಂಡರೆ ಅವನಿಗೆಲ್ಲಿಲ್ಲದ ನಗು'. [ಸ್ವ.ಸಾ.ಪುಟ ೪೦೬]

ತಿಮ್ಮಪ್ಪೈಯ ಜೊತೆ ಜಗಳವಾಡಿ ಬಂದ ಶಿವಪ್ಪಯ್ಯ ಅದೇ ಕೊರಗಿನಲ್ಲಿ ಸತ್ತಾಗ ಭುಜಂಗ ಪೈ ತನ್ನ ತಂದೆಯ ಸಾವಿಗೆ ರಾಮಚಂದ್ರಪ್ಪೈ ಮಾಡಿಸಿದ ಮಾಟ-ಮಂತ್ರವೇ ಕಾರಣ ಎಂದು ಗುಲ್ಲೆಬ್ಬಿಸಿದ್ದನು. ಭುಜಂಗ ಪೈ ಅವರ ಬಗ್ಗೆ ಏನಾದರೂ ತೆಗಳುವ ಮಾತುಗಳನ್ನು ಆಡುತ್ತಾ ಇರುವುದನ್ನು ಅಭ್ಯಾಸ ಮಾಡಿಕೊಂಡಿದ್ದನು. ತಂದೆ ಸತ್ತ ಮೇಲೆ ಅವನ ಮನಸ್ಸು ಕಡಿವಾಣವಿಲ್ಲದ ಕುದುರೆಯಂತೆ ಮತ್ತಷ್ಟು ಹಾರಿತ್ತು.

ರಾಮಚಂದ್ರ ಪೈ ತನ್ನ ಕೊನೆಯ ಮಗ ಸಿದ್ಧಪೈಯ ಮದುವೆಯನ್ನು ದಾಸಕಿಣಿಯ ಮಗಳ ಜೊತೆ ಮಾಡಿಸಿದಾಗ ಭುಜಂಗ ಪೈಗೆ ಮತ್ತಷ್ಟು ಹೊಟ್ಟೆಕಿಚ್ಚಾಗುತ್ತದೆ. ನಂತರ ಕಾವೇರಮ್ಮ ದಾಸಕಿಣಿಯ ಮತ್ತೊಬ್ಬ ಮಗಳನ್ನು ಭುಜಂಗಪೈ ಜೊತೆ ಮದುವೆ

ಮಾಡಿಸಲು ಬಯಸಿದಾಗ ಒಂದೇ ಮನೆಗೆ ಅಕ್ಕ-ತಂಗಿಯರನ್ನು ಕೊಡುವುದಿಲ್ಲ ಎಂದು ದಾಸಕಿಣಿ ನಿರಾಕರಿಸುವುದರ ಜೊತೆಗೆ ರಾಮಚಂದ್ರ ಪೈ ಸಹ ಮದುವೆ ಮಾಡುವುದು ಬೇಡವೆಂದು ಹೇಳುತ್ತಾನೆ. ಈ ಕಾರಣದಿಂದ ರೊಚ್ಚಿಗೆದ್ದ ಭುಜಂಗಪೈಯ ಮನದಲ್ಲಿ ರಾಮಚಂದ್ರ ಪೈ ಬಗ್ಗೆಯಿದ್ದ ದ್ವೇಷ ಸೇಡಾಗಿ ಪರಿವರ್ತನೆಗೊಳ್ಳುತ್ತದೆ. ಆಗಿನಿಂದ ರಾಮಚಂದ್ರ ಪೈಯ ಕುಟುಂಬವನ್ನು ನಾಶಮಾಡಲು ಮಾಟ-ಮಾಡಿಸಲು ಮಂತ್ರವಾದಿಗಳನ್ನು ಹುಡುಕಲಾರಂಭಿಸುತ್ತಾನೆ. ಬೆದರಂಪಳ್ಳದ ನಾರಾಯಣ ಬಲ್ಯಾಯರಲ್ಲಿಗೆ ಅಮಾವಾಸ್ಯೆಯ ದಿನ ಪೂಜೆ ಮಾಡಿಸಲು ಹೋದಾಗ ಅವರು ಪೂಜೆಗಾಗಿ ಬೇಕಾಗಿರುವ ಸಾಮಾನುಗಳ ದೊಡ್ಡ ಪಟ್ಟಿ ಕೊಟ್ಟಾಗ ಹಿಂಜರಿಯುತ್ತಾನೆ. ನಂತರ ಮುಸಲ್ಮಾನ ಗೃಹಸ್ಥನೊಬ್ಬನ ಮೇಲೆ ಬರುವ ಆಲಿ ಭೂತಕ್ಕೆ ಪ್ರಶ್ನೆ ಕೇಳಲು ಹೋಗಿ ಅದರ ಆರ್ಭಟ, ಮೈಯ ಅದುರಿಕೆ ಎಲ್ಲಾ ನೋಡಿ ಹೆದರಿ ಓಡಿಹೋಗುತ್ತಾನೆ. ಆ ಸಮಯದಲ್ಲಿ ಭೋಜ ಪಾಟಾಳಿ ಎಂಬ ಮಂತ್ರವಾದಿಯ ಪರಿಚಯ ಮಾಡಿಕೊಳ್ಳುತ್ತಾನೆ. ಸಿದ್ಧು ಪೈಯ ಹೆಂಡತಿ ಗರ್ಭಿಣಿಯೆಂದು ತಿಳಿದಾಗ ಭುಜಂಗ ಪೈ ಆ ಮಗು ಹೊಟ್ಟೆಯಲ್ಲೇ ಸತ್ತು ಅವರ ವಂಶ ಬೆಳೆಯದಂತೆ ಮಾಡುತ್ತೇನೆಂದು ಹಠತೊಟ್ಟು ಭೋಜಾ ಪಾಟಳಿಯ ಹತ್ತಿರ ಹೋಗಿ ಮಾಟ-ಮಂತ್ರ ಮಾಡಿಸುತ್ತಾನೆ. ಸಾಕಷ್ಟು ದವಸ-ಧಾನ್ಯಗಳನ್ನು, ಹಣವನ್ನು ವಸೂಲಿ ಮಾಡಿಕೊಂಡು ಭೋಜಾ ಪಾಟಳಿ ಮಾಯವಾದಾಗ ಭುಜಂಗ ಪೈ ತಾನೇ ಕಾರ್ಯಾಚರಣೆಗೆ ಮುಂದಾಗುತ್ತಾನೆ. ರಾಮಚಂದ್ರ ಪೈ ಗೋವಿಂದ ಭಟ್ಟರಿಂದ ಅಂಜನ ಹಾಕಿಸಿ ಹುಡುಕಿಸಿ ಪ್ರತಿಷ್ಠಾಪಿಸಿದ ನಾಗಬಿಂಬವೇ ಆತನ ಏಳಿಗೆಗೆ ಕಾರಣವೆಂದು ತಿಳಿದ ಭುಜಂಗಪೈ ಅದನ್ನು ರಂಗಪೈನಿಂದ ಹಾರಿಸಲು ಸಂಚುಹೂಡುತ್ತಾನೆ. ಹೆದರಿಸಿ-ಬೆದರಿಸಿ ರಂಗಪೈಯನ್ನು ಒಪ್ಪಿಸಿ ಒಂದು ಕರಾಳರಾತ್ರಿಯಲ್ಲಿ ಬಳ್ಳಂಬೆಟ್ಟಿಗೆ ತೆರಳುತ್ತಾನೆ. ಭುಜಂಗ ಪೈಯ ಆದೇಶದಂತೆ ನಾಗಬಿಂಬವನ್ನು ಹೊತ್ತುಕೊಂಡು ಬರುವಾಗ ದಿಕ್ಕು ತಪ್ಪಿ ಗಾಬರಿಗೊಂಡ ರಂಗಪೈ ಆಯಾತಪ್ಪಿ ಕಮರಿಯಲ್ಲಿ ಬಿದ್ದು ಸಾಯುತ್ತಾನೆ.

ರಂಗಪೈಯ ಸಾವಿಗೆ ತಾನೇ ಕಾರಣನಾದರೂ ಅದನ್ನು ಮುಚ್ಚಿಟ್ಟು ಆ ಆರೋಪವನ್ನೂ ರಾಮಚಂದ್ರಪೈಯ ಮೇಲೆಯೇ ಹೊರಿಸುತ್ತಾನೆ. ಇಷ್ಟಾದರೂ ಬುದ್ಧಿ ಕಲಿಯದ ಭುಜಂಗ ಪೈ ತಾನೇ ಹೋಗಿ ರಾಮಚಂದ್ರ ಪೈಯ ಮನೆಗೆ ಬೆಂಕಿ ಹಚ್ಚಲು ಹೊಂಚು ಹಾಕುತ್ತಾನೆ.

'ಕತ್ತಲಲ್ಲಿ ನಿಂತು ಭುಜಂಗ ಪೈ ನೋಡಿದ್ದು ಸೂರು ಬಾಯಿ ಬಿಟ್ಟ ಆ ಮನೆಯನ್ನು. ದೀಪದ ಬೆಳಕಿನಲ್ಲಿ ಮೈ ಮೇಲೆ ಅರಿವೆಯ ತುಣುಕೂ ಇಲ್ಲದ ದೇಹವೊಂದು ಒಳಕೋಣೆಯ ಬಳಿ ನಿಂತುಕೊಂಡಿತ್ತು. ಬಿಳಿಚಿದ ದೇಹ, ಬೆಳಕಿಲ್ಲದ ಕಣ್ಣುಗಳು, ಬೆಳ್ಳನೆಯ ತಲೆಗೂದಲು, ಸೊರಗಿ ಕಡ್ಡಿಯಾದ ಮೈ. ಮೂಳೆಗಳು ಹೊರಬರುವಂಥ ಭುಜಗಳು, ಒಣಗಿ ಜಿರುಟಾದ ಮೊಲೆಗಳು, ಹಂದರದ ಕಡ್ಡಿಗಳಂಥ ಎದೆಗೂಡು, ಬೆನ್ನಿಗೆ ಸೇರಿದ ಹೊಟ್ಟೆ, ಚರ್ಮ ಕೂಡಾ ತೆಳ್ಳಗಾಗಿ ಒಳಗೆ ರಕ್ತದ ಬದಲು ಸುಣ್ಣದ

ನೀರು ತುಂಬಿದಂತೆ. ಭುಜಂಗ ಪೈ ಥರ ಥರ ನಡುಗಿದ. ಎದೆ ಜೋರಾಗಿ ಹೊಡೆದುಕೊಂಡಿತು. ಯಾವುದೋ ಆಕರ್ಷಣೆಗೆ ಸಿಕ್ಕಿದವನಂತೆ ಅವನು ಮುಂದೆ ಹೆಜ್ಜೆ ಹಾಕಿ ಜರಿದು ಬಿದ್ದು ಮೋಟು ಗೋಡೆಯ ಸಂದಿಯ ಮೂಲಕ ಒಳಗೆ ಇಣಿಕಿ ನೋಡಿದ' [ಸ್ವಸಾ. ಪುಟ ೪೪೭]

ಭುಜಂಗ ಪೈ ನೋಡಿದ ದೃಶ್ಯ ಆತನ ಗುಂಡಿಗೆಯನ್ನು ಅಲ್ಲಾಡಿಸಿಬಿಡುತ್ತದೆ. ಅವನು ಕಂಡ ಬಿಳಿಯ ಆಕೃತಿ ಕೆಳಗೆ ಬಿದ್ದ ಕಪ್ಪು ಆಕೃತಿ ದೇಹವನ್ನು ಕಿತ್ತು ಕಿತ್ತು ತಿನ್ನುವುದನ್ನು ಕಂಡು ದಿಗ್ಭ್ರಾಂತನಾದ ಭುಜಂಗ ಪೈ ಕುತೂಹಲದಿಂದ ಶಬ್ಧವಾಗದಂತೆ ಬಾಗಿಲ ಬಳಿ ಬಂದು ಇಣುಕಿ ನೋಡುತ್ತಾನೆ.

'ಹರಿದ ಕಿವಿ, ಮೂಗು, ಎದೆಯ ಭಾಗಗಳು, ಹೆಪ್ಪುಗಟ್ಟಿದ ರಕ್ತ ಅಂಗೈಯೇ ಇಲ್ಲದ ಬಾಹುಗಳು, ಕಚ್ಚಿ-ಕಚ್ಚಿ ತಿಂದುಳಿದ ದೇಹ – ನೋಡುತ್ತಾ ಇದ್ದಂತೆಯೇ ತನ್ನ ಭುಜದ ಮೇಲೆ ತಣ್ಣನೆಯ ಕೈಯೊಂದು ಬಿದ್ದಂತಾಗಿ ಹಾವು ಮೆಟ್ಟಿದವನಂತೆ ಸರಕ್ಕನೆ ತಿರುಗಿ ನೋಡಿದ ಭುಜಂಗ ಪೈ ! ಎದುರಿಗೆ ಹೆಣ್ಣೆಂದು ಹೇಳಲಾಗದ ಆ ಬಿಳಿಯ ಆಕೃತಿ. ಭೀಕರವಾದ ಕಣ್ಣುಗಳಲ್ಲಿ ವಿಲಕ್ಷಣ ನೋಟ. ಕೈಯಲ್ಲಿ ಹಿಡಿದ ದೀಪದಿಂದ ಇನ್ನೂ ಘೋರವಾಗಿ ಕಾಣುವ ಮುಖ ! ಭುಜಂಗ ಪೈಯ ನಾಲಗೆಯ ದ್ರವ ಆರಿ ಹೋಯಿತು. ಆ ಎಲುಬು ಕೈಯನ್ನು ಭುಜದಿಂದ ನೂಕಲು ಪ್ರಯತ್ನಿಸಿದ. ಆದರೆ ಅದರ ಹಿಡಿತ ಬಲವಾಗಿತ್ತು. ಅವನು ಇದ್ದಬಿದ್ದ ಶಕ್ತಿಯನ್ನೆಲ್ಲ ಹಾಕಿ ಆ ಕೈಯನ್ನು ತನ್ನ ಭುಜದಿಂದ ಬಿಡಿಸುವ ಪ್ರಯತ್ನ ಮಾಡಿದ. ಆ ಪ್ರಯತ್ನ ಸಫಲವಾಗಲಿಲ್ಲ. ಅವನು ಥರ ಥರ ನಡುಗುತ್ತಿದ್ದ, ಕೈಗಳಲ್ಲಿ ಬಲವೇ ಇಲ್ಲದಂತಾಗಿತ್ತು. ಬಿಡಿಸಿಕೊಳ್ಳುವ ಪ್ರಯತ್ನದಲ್ಲಿ ಅದರ ಕೈಯಲ್ಲಿದ್ದ ದೀಪ ಕೆಳಗೆ ಉರುಳಿಬಿತ್ತು. ಬಿದ್ದದ್ದೇ ಪಕ್ಕದ ಹುಲ್ಲಿಗೆ ತಾಗಿತು. ತಾಗಿದ ಬೆಂಕಿ ಒಮ್ಮೆಲೇ ಉರಿಯುತ್ತಾ ಮನೆಯ ಸೂರಿಗೆ ಹೋಯಿತು. ಬೆಂಕಿಯ ಮಧ್ಯೆಯೂ ಆ ಆಕೃತಿಯ ತಣ್ಣನೆಯ ದೇಹಸ್ಪರ್ಶವಾದದ್ದೇ ಭುಜಂಗ ಪೈ ನಿಶ್ಚೇಷ್ಟಿತನಾದ. ಅದು ಅವನ ಮೈಮೇಲೆ ಹಾರಿ ತನ್ನೆರಡು ಕಾಲುಗಳನ್ನೂ ಅವನ ಸೊಂಟದ ಸುತ್ತ ಹಾಕಿ ಅವನ ತುಂಬಿದ ಕೆನ್ನೆಯನ್ನು ಗಟ್ಟಿಯಾಗಿ ಕಚ್ಚಿ ಹಿಡಿಯಿತು. ಭುಜಂಗ ಪೈ 'ಅಯ್ಯೊ-ಅಮ್ಮ' ಎಂದು ಚೀರಿದ. ಸುತ್ತ ಹಿಡಿದಿದ್ದ ಬೆಂಕಿ ಅವನ ಪಂಚೆಗೂ ತಾಗಿ ಭಗ ಭಗ ಉರಿಯತೊಡಗಿತು. ಆದರೂ ಸುತ್ತ ಹಿಡಿದ ಕೈಯ ಕಪಿ ಮುಷ್ಟಿಯನ್ನು ಅವನಿಂದ ಬಿಡಿಸಿಕೊಳ್ಳಲಾಗಲಿಲ್ಲ. ಬೆಂಕಿಯ ಝಳ ಏರುತ್ತಲೇ ಹೋಯಿತು'. [ಸ್ವಸಾ. ಪುಟ ೪೪೮-೪೪೯]

ಹೀಗೆ ಭುಜಂಗ ಪೈ ಭೀಕರವಾದ ಸಾವನ್ನಪ್ಪುತ್ತಾನೆ.

ತಿಮ್ಮಪೈ ತನ್ನ ಹಠಮಾರಿತನಕ್ಕೆ ಬಲಿಯಾದರೆ, ಭುಜಂಗ ಪೈ ತನ್ನ ಮನದಲ್ಲಿ ಬೆಳೆಸಿಕೊಂಡು ಬಂದಿದ್ದ ಸೇಡಿಗೆ ಬಲಿಯಾಗುತ್ತಾನೆ. ಈ ಇಬ್ಬರೂ ಒಂದೇ ಸ್ಥಳದಲ್ಲಿ ಅಂದರೆ ಬಳ್ಳಂಬೀಡಿನ ಮನೆಯಲ್ಲಿ ಸಾವಿಗೀಡಾಗುವುದು ಒಂದು ವಿಪರ್ಯಾಸವಾಗಿದೆ.

ಏಕೆಂದರೆ ತಿಮ್ಮಪೈ ರಾಮಚಂದ್ರ ಪೈಯ ಕುಟುಂಬದ ವಿನಾಶಕ್ಕೆ ನಾಂದಿ ಹಾಡಿದರೆ ಭುಜಂಗ ಪೈ ಅದಕ್ಕೆ ಮಂಗಳ ಹಾಡುತ್ತಾನೆ. ಈ ಘಟನೆ ನಡೆದ ಕೆಲವೇ ಸಮಯದಲ್ಲಿ ರಾಮಚಂದ್ರ ಪೈ ಕುಟುಂಬದ ಸದಸ್ಯರೂ, ಮಲತಮ್ಮಂದಿರ ಕುಟುಂಬದವರು ಎಲ್ಲರೂ ಒಂದಾನೊಂದು ಕಾರಣದಿಂದ ಸಾವನ್ನಪ್ಪುತ್ತಾರೆ. ಸಿದ್ದುಪೈಯ ಮಗು ವೆಂಕಟೇಶ ಪೈಯನ್ನು ಉಳಿಸಿಕೊಳ್ಳಲು ರಾಮಚಂದ್ರ ಪೈ ಹೆಣಗಾಡುತ್ತಾ ನಾಗ್ಡೊ ಬೇತಾಳನಿಗಾಗಿ ಕಾದು ಕೂರುತ್ತಾನೆ. ಹೀಗೆ ತಿಮ್ಮಪೈ ಮತ್ತು ಭುಜಂಗ ಪೈಯ ಪಾತ್ರಗಳು ಕಥೆಯ ತಿರುವಿಗೆ ಕಾರಣವಾಗಿ ಪ್ರಾಮುಖ್ಯತೆ ಪಡೆದಿವೆ.

## ಸ್ತ್ರೀ ಪಾತ್ರಗಳು

ಪಿತೃಪ್ರಧಾನ ಸಂಸ್ಕೃತಿಯನ್ನು ಪಾಲಿಸುವ ಸಾರಸ್ವತ ಸಮುದಾಯದಲ್ಲಿ ಸ್ತ್ರೀ ಪಾತ್ರಗಳಿಗೆ ಹೆಚ್ಚು ಪ್ರಾಮುಖ್ಯತೆ ಇಲ್ಲ. ಬರುವ ಸ್ತ್ರೀ ಪಾತ್ರಗಳು ನಮ್ರ ಸ್ವಭಾವದ, ರಟ್ಟೆ ಮುರಿದು ದುಡಿಯುವ, ಕುಟುಂಬದಲ್ಲಿನ ಹಿರಿಯರ, ಗಂಡ–ಮಕ್ಕಳ ದೇಖರೇಖದಲ್ಲೇ ಜೀವನ ಸವೆಸುವ ಮುಗ್ಧ ಪಾತ್ರಗಳಾಗಿವೆ. ಆದರೂ ತಲೆಮಾರುಗಳು ಬದಲಾದಂತೆ ಸ್ತ್ರೀ ಪಾತ್ರಗಳಲ್ಲೂ ಬದಲಾವಣೆ ತೋರಿಸಲಾಗಿದೆ. ಕಾದಂಬರಿಯ ಮೊದಲಿಗೆ ಬರುವ ಸ್ತ್ರೀ ಪಾತ್ರ ಅಳುವ ಹೆಣ್ಣಿನದಾಗಿವೆ. ಧಡ್ಡನನ್ನು ಮನೆಯಲ್ಲಿಯೇ ಇರಿಸಬೇಕೆಂದು ಗಂಡನೊಡನೆ ಕೇಳುವಾಗಲೂ ರಾಧಾಬಾಯಿ ಅಳುತ್ತಲೇ ಕೇಳುತ್ತಾಳೆ. ವಿಟ್ಟು ಪೈ ಜೊತೆಗೆ ದೈಹಿಕ ಸಂಬಂಧ ಬೆಳೆಸುವ ಅಲ್ವೀರಾಳ ಪ್ರೌಢ ಪಾತ್ರ, ವಲಸೆಯ ಸಮಯದಲ್ಲಿ ಧೈರ್ಯದಿಂದ ಎದ್ದುನಿಂತು ಮಾತನಾಡುವ ತುಳಸೀ ಬಾಯಿಯ ಪಾತ್ರ ಜಾಹ್ನವಿಯ ವಿಚಿತ್ರ ಪ್ರತಿಭಟನೆ, ಶಾಪ ಹಾಕುವ ಕಾವೇರಮ್ಮನ ಪಾತ್ರ, ಹೀಗೆ ಹಂತ ಹಂತವಾಗಿ ಸ್ತ್ರೀವಾದದತ್ತ ನಡೆಯುತ್ತದೆ. ತನ್ನ ಆಕ್ರೋಶವನ್ನು ಹೊರಗೆಡವಲು ಅವಕಾಶವಿಲ್ಲದ ಜಾಹ್ನವಿ ಎಲ್ಲರನ್ನೂ ಧಿಕ್ಕರಿಸಿ ಪಾಳು ಮನೆಯಲ್ಲಿ ಒಂಟಿಯಾಗಿ ನರಭಕ್ಷಕಳಂತೆ ಜೀವಿಸುವುದು, ಮಗನ ಸಾವಿನಿಂದ ಹತಾಶಳಾದ ಕಾವೇರಮ್ಮ ರಾಮಚಂದ್ರ ಪೈನ ಕುಟುಂಬ ನಾಶಗೊಳ್ಳಲಿ ಎಂದು ಶಾಪ ಹಾಕಿ ಮಕ್ಕಳೊಡನೆ ಬಾವಿಗೆ ಹಾರುವುದು ಅಸಹಾಯಕ ಸ್ತ್ರೀಯರ ಒಡಲ ತಳಮಳವನ್ನು ಸೂಚಿಸುತ್ತದೆ.

## ಜಾಹ್ನವಿ ಮತ್ತು ಕಾವೇರಮ್ಮ

ಜಾಹ್ನವಿ ಮತ್ತು ಕಾವೇರಮ್ಮ ಇಬ್ಬರೂ ತಮ್ಮ ಗಂಡಂದಿರ ಕೊನೆಯ ಮಾತನ್ನು ಪಾಲಿಸಲು ಹೋಗಿ ತಮ್ಮ ಜೀವನವನ್ನೇ ನರಕವನ್ನಾಗಿಸಿಕೊಂಡರೂ ಸ್ವಾಭಿಮಾನವನ್ನು ಕಾಯ್ದುಕೊಂಡಿದ್ದಾರೆ.

ಜಾಹ್ನವಿ 'ನನ್ನನ್ನು ಈ ಮನೆಗೆ ಅವರು ತಂದರು, ಇದನ್ನು ಬಿಟ್ಟು ನಾನು ಹೊರಗೆ ಬರುವವಳಲ್ಲ! [ಸ್ವಸಾ. ಪುಟ ೩೮೨] ಎಂದು ಪಾಳುಬಿದ್ದ ಮನೆಯಲ್ಲಿ ತಾನೇ ಬಂಧಿತಳಾಗಿ ಜೀವಿಸುವುದೂ ಹಠಮಾರಿತನವೆನ್ನಿಸಿದರೂ 'ತಾನೇ ಹಠಹಿಡಿದುಕೊಂಡು

ಮಾಡಿದ ಮದುವೆ ಈ ಗತಿ ಹಿಡಿದಿದ್ದಕ್ಕೆ ಆಕೆ ತನ್ನನ್ನೇ ಜವಾಬ್ದಾರಿ ಮಾಡಿಕೊಂಡಿದ್ದಳು' [ಸ್ವಸಾ. ಪುಟ ೩೮೪] ಎಂದಿರುವುದು ಆಕೆಯ ಸ್ವಾಭಿಮಾನದ ನಿದರ್ಶನವಾಗಿದೆ. ಹೀಗೆ ಹೊರಗಿನ ಪ್ರಪಂಚದ ಪರಿವೆಯೇ ಇಲ್ಲದಂತೆ ಪಿಶಾಚಿಯಂತೆ ಬದುಕಿದ ಜಾಹ್ನವಿ ಕಾಲ ಕಳೆದಂತೆ ಕಾಳಿಯ ಶವವನ್ನೇ ತಿನ್ನುತ್ತಾ ನರಭಕ್ಷಕಳಾಗಿ ಕಥೆಯ ಕೊನೆಯಲ್ಲಿ ಭುಜಂಗ ಪೈಯ ಸಾವಿಗೂ ಕಾರಣಳಾಗುತ್ತಾಳೆ. ತಿಮ್ಮಪ್ಪೈಯ ಸಾವಿನೊಡನೆಯೇ ತೆರೆಯ ಮರೆಗೆ ಸರಿದ ಜಾಹ್ನವಿಯ ಪಾತ್ರ ಕೊನೆಗೆ ನರಭಕ್ಷಕಳಾಗಿ ಮತ್ತೇ ಕಾಣಿಸಿಕೊಳ್ಳುವುದು ಎಷ್ಟು ಸರಿ ಎಂದೆನಿಸಿದರೂ ಭುಜಂಗ ಪೈಯ ಅಂತ್ಯಕ್ಕೆ ಕಾರಣವಾಗುವುದಕ್ಕೋಸ್ಕರ ಲೇಖಕರು ಈ ಪಾತ್ರವನ್ನು ಕಾದಿರಿಸಿದ್ದರೋ ಎಂದೆನಿಸದಿರದು.

ಕಾವೇರಮ್ಮ ಸಹ, ತಿಮ್ಮಪ್ಪೈಯ ಜೊತೆ ಜಗಳ ಮಾಡಿ ಮತ್ತೇ ಆ ಮನೆಗೆ ಕಾಲಿಡುವುದಿಲ್ಲವೆಂದು ಮಂಜುನಾಥನ ಆಣೆ ಹಾಕಿ ರಾಮಚಂದ್ರಪ್ಪೈಯ ಮನೆಯಿಂದ ಹೊರಬಿದ್ದ ತನ್ನ ಗಂಡನ ಮಾತನ್ನು ಅಕ್ಷರಶಃ ಪಾಲಿಸುತ್ತಾಳೆ.

ಗಂಡ ಸತ್ತ ಮೇಲೆ ತೋಟದ ಜವಾಬ್ದಾರಿಯನ್ನು ತಾನೇ ವಹಿಸಿಕೊಂಡು ಹಗಲಿರುಳು ರಟ್ಟೆ ಮುರಿದು ದುಡಿಯುತ್ತಾಳೆ. ಆಕೆಯ ದೊಡ್ಡ ಮಗ ಭುಜಂಗಪ್ಪೈ ರಾಮಚಂದ್ರ ಪೈಯ ಮೇಲೆ ದ್ವೇಷ, ಸೇಡುಗಳನ್ನು ಬೆಳೆಸಿಕೊಂಡು ಅಲೆಮಾರಿಯಾಗಿರುತ್ತಾನೆಯೇ ಹೊರತು ತಾಯಿಗೆ ಸಹಾಯ ಮಾಡುವುದಿಲ್ಲ. ಕಾವೇರಮ್ಮ ಹೇಗಾದರೂ ಮಗನಿಗೆ ಮದುವೆಮಾಡಿಸಲು ಮುಂದಾದಾಗ ಒಂದೇ ಮನೆಯಲ್ಲಿ ಅಕ್ಕ ತಂಗಿಯರನ್ನು ತರುವುದು ಬೇಡ ಎಂದು ರಾಮಚಂದ್ರಪ್ಪೈ ತಡೆದಾಗ ಈ ವಿಷಯದಲ್ಲೂ ಅಡ್ಡಗಾಲು ಹಾಕಿದರೆಂದು ಸಿಟ್ಟುಗೊಳ್ಳುವುದರ ಜೊತೆಗೆ ಹತಾಶಳಾಗುತ್ತಾಳೆ. ಭುಜಂಗಪ್ಪೈ ತನ್ನ ಕುಕೃತ್ಯಕ್ಕೆ ಬಲಿಯಾದಾಗ ಆಕೆಯ ಮನದಲ್ಲಿ ತುಂಬಿದ್ದ ಸಿಟ್ಟು ಶಾಪವಾಗಿ ಹೊರಬೀಳುತ್ತದೆ. "ಬಳ್ಳಂಬೆಟ್ಟು ನಿರ್ನಾಮವಾಗಲೀ, ಕೌಂಶಗೋತ್ರದ ವಿಟ್ಟುಪೈಯ ಸಂತಾನ ನಿಶ್ಯೇಷವಾಗಲೀ" [ಸ್ವಸಾ. ಪುಟ ೪೫೨] ಎಂದು ರಾಮಚಂದ್ರ ಪೈಗೆ ಶಾಪ ಹಾಕಿ ತನ್ನ ಇಬ್ಬರು ಮಕ್ಕಳನ್ನೂ ಎಳೆದುಕೊಂಡು ಬಾವಿಗೆ ನೂಕಿ ತಾನೂ ಜಿಗಿದು ಪ್ರಾಣಕಳೆದುಕೊಳ್ಳುತ್ತಾಳೆ.

ಹೀಗೆ ಜಾಹ್ನವಿ ಮೌನವಾಗಿದ್ದು ಪ್ರತಿಭಟಿಸಿ ಅಂತ್ಯಕಂಡರೆ, ಕಾವೇರಮ್ಮ ಶಾಪ ಕೊಡುವುದರ ಮೂಲಕ ಪ್ರತಿಭಟಿಸಿ ಪ್ರಾಣಕಳೆದುಕೊಳ್ಳುತ್ತಾಳೆ.

### ಪೋರ್ಚುಗೀಸರ ಪಾತ್ರಗಳು

ಕ್ರೂರಿಗಳಾಗಿ, ಸ್ವಾರ್ಥಿಗಳಾಗಿ ಸ್ಥಳೀಯ ಜನರನ್ನು ನಾನಾ ರೀತಿಗಳಿಂದ ಹಿಂಸಿಸುವ ಪೋರ್ಚುಗೀಸರ ಮಧ್ಯೆಯೂ ಕೊಮಿನೋ ಹಾಗು ಅಲ್ವೀರಾಳ ಒಳ್ಳೆಯ ಪಾತ್ರಗಳು ಕಾಣಸಿಗುತ್ತವೆ.

## ಅಲ್ಫೆಕ್ಸೊ ದಿಯಾಜ್ ಕೊಮಿನೋ

ಕೊಮಿನೋ ಚಿಕ್ಕಂದಿನಲ್ಲಿಯೇ ತನ್ನ ತಂದೆಯಿಂದ ಇಂಡಿಯಾದ ಕಥೆಯನ್ನು ಕೇಳಿ ಆಕರ್ಷಿತನಾಗಿರುತ್ತಾನೆ. ತನ್ನ ಹದಿನೆಂಟನೆಯ ವರ್ಷದಲ್ಲಿ ಸೈನ್ಯಕ್ಕೆ ಸೇರಿ ಗೋವೆಗೆ ಬರುತ್ತಾನೆ. ನಂತರ ತನ್ನ ಹೆಂಡತಿಯ ಜೊತೆ ವೆರಣೆಯಲ್ಲಿ ಬಂದು ನೆಲೆಸುತ್ತಾನೆ. ಆತ ಖಾಲಿ ಇದ್ದ ಸಾಂತಯ್ಯ ಪುರೋಬುವಿನ ಮನೆಯಲ್ಲಿ ವಾಸಮಾಡಲು ತೊಡಗಿದಾಗ ಕೋಪಗೊಂಡ ಜನರು ಯಾರೂ ಆತನ ಮನೆಗೆ ಕೆಲಸಮಾಡಲು ಹೋಗದೆ ಪ್ರತಿಭಟಿಸುತ್ತಾರೆ. ಆಗ ಕೋಪಗೊಂಡ ಕೊಮಿನೋ ಒಬ್ಬ ಕುಡುಂಬಿ ತರುಣನನ್ನು ಗುಂಡಿಕ್ಕಿ ಕೊಂದು ಬಿಡುತ್ತಾನೆ. ಆ ಘಟನೆಯಿಂದಾಗಿ ಸ್ಥಳೀಯರ ಜೊತೆ ಬೆರೆತು ಬಾಳಬೇಕೆಂದಿದ್ದ ಆಸೆ ನೆರವೇರುವುದಿಲ್ಲವಾದರೂ ನಂತರ ಕೊಮಿನೋ ಕೊಂಕಣಿ ಭಾಷೆ ಕಲಿತು ಎಲ್ಲರ ಮನೆಗಳಿಗೆ ಹೋಗಿ ಮಾತನಾಡಿಸುತ್ತಾ ಸ್ನೇಹ ಬೆಳೆಸುತ್ತಾನೆ. ಗೋಯೆಸ್ ಅಧಿಕಾರಿಯಾಗಿ ಬಂದು ಸ್ಥಳೀಯರ ಮೇಲೆ ಕ್ರೌರ್ಯ ನಡೆಸುವುದು ಕೊಮಿನೋಗೆ ಹಿಡಿಸುವುದಿಲ್ಲ. ಆತ ಗೋಯೆಸ್‌ನನ್ನು ದೇವಸ್ಥಾನಗಳ, ಪುರೋಹಿತರ ತಂಟೆಗೆ ಹೋಗಬೇಡವೆಂದು ತಡೆದಾಗ ಗೋಯೆಸ್ ಆತನನ್ನು ಮೂದಲಿಸುತ್ತಾನೆ. ಹೀಗಾಗಿ ಕೊಮಿನೋ ತನ್ನ ಜನರಿಂದಲೇ ದೂರವಾಗುಳಿಯುತ್ತಾನೆ.

ನಂತರ ಕಾಸ್ಟೈಲೋ ಎಂಬ ಅಧಿಕಾರಿ ಗಲಭೆಯಲ್ಲಿ ಸತ್ತಾಗ ಕೊಮಿನೋನ ಹೆಂಡತಿ ಹೆದರಿ ತಮ್ಮ ಊರಿಗೆ ವಾಪಸ್ಸಾಗಲು ಕೊಮಿನೋನಿಗೆ ತಿಳಿಸುತ್ತಾಳೆ. ಆದರೆ ಅವಳನ್ನು ಕೊಮಿನೋ ಗೋಯೆಸನ ಕ್ರೌರ್ಯವನ್ನು ವಿವರಿಸಿ ಸ್ಥಳೀಯರ ತಪ್ಪಿಲ್ಲವೆಂದು ಸಮಾಧಾನಪಡಿಸುತ್ತಾನೆ. ಆದರೆ ನಂತರ ಅದೇ ಭೀತಿಯಿಂದ ಹೆಂಡತಿ ಕಾಯಿಲೆಬಿದ್ದಾಗ ಮಾಳಪ್ಪಯ್ಯನವರ ಸಹಾಯಕೋರುತ್ತಾನೆ. ಮಾಳಪ್ಪಯ್ಯನ ಹೆಂಡತಿ ರಾಧಾಬಾಯಿ ಮರಿಯಾಳ ಬಾಯಿಗೆ ಮ್ಹಾಳಶಿಮಾಂಯಿಯ ಪ್ರಸಾದ ಹಾಕಿ ಕಷಾಯ ಮಾಡಿ ಕುಡಿಸಿ ಶುಶ್ರೂಷೆ ಮಾಡುತ್ತಾಳೆ. "ಮರುದಿನ ಕೊಮಿನೋ ಒಂದಿಷ್ಟು ಹಣ್ಣುಗಳನ್ನು ಹಿಡಿದುಕೊಂಡು ಮಾಳಪ್ಪಯ್ಯನವರ ಮನೆಗೆ ಬಂದು, ಅವರೆದುರಿಟ್ಟು ಸ್ಥಳೀಯರಂತೆ ಸಾಷ್ಟಾಂಗ ನಮಸ್ಕರಿಸಲು ಎರಗಿದಾಗ ಮಾಳಪ್ಯಯ್ಯನವರ ಕಣ್ಣು ತುಂಬಿಬಂತು" [ಸ್ವಸಾ. ಪುಟ ೭೫]

ಹೀಗೆ ಕೊಮಿನೋ ತನ್ನ ಜನರಿಂದ ದೂರವಾಗಿ ಸ್ಥಳೀಯರಿಗೆ ಹತ್ತಿರವಾಗಿ ಎಲ್ಲರ ಮನಗೆಲ್ಲುತ್ತಾನೆ.

## ಅಲ್ವೀರಾ

ಬ್ರಾಹ್ಮಣರನ್ನು ದ್ವೇಷಿಸುತ್ತಿದ್ದ ಗೋಯೆಸನ ಮಗಳು ಅಲ್ವೀರಾಳಿಗೆ ಒಂದು ಸಂದರ್ಭದಲ್ಲಿ ವಿಟ್ಠುಪೈಯ ಜೊತೆ ದೈಹಿಕ ಸಂಪರ್ಕವಾಗುತ್ತದೆ. ಅವರಿಬ್ಬರೂ ಪರಸ್ಪರ ಆಕರ್ಷಿತರಾಗಿ ಈ ಸಂಬಂಧ ವಿಟ್ಠುಪೈ ವೆರಣೆ ಬಿಡುವವರೆಗೂ ನಡೆಯುತ್ತದೆ. ತನ್ನ

ತಂದೆಯೇ ಮತಾಂತರದ, ದೇವಸ್ಥಾನಗಳ ನಾಶದ ಮುಂದಾಳತ್ವ ವಹಿಸಿದ್ದರೂ ಅಲ್ವೀರಾ ಅದರ ಬಗ್ಗೆ ತಲೆಕೆಡಿಸಿಕೊಳ್ಳುವುದೂ ಇಲ್ಲ. ವಿಟ್ಠುಪೈ ಮತಾಂತರವಾಗಬೇಕೆಂದು ಒಮ್ಮೆಯೂ ಹೇಳುವುದಿಲ್ಲ ವಿಟ್ಠುಪೈಗಿಂತ ಹಿರಿಯಳಾದ ಆಕೆ ಆತನ ಆತಂಕ, ದುಗುಡಗಳನ್ನು ಅರ್ಥಮಾಡಿಕೊಂಡು ದೈಹಿಕವಾಗಿ ಮಾನಸಿಕವಾಗಿ ಸಾಂತ್ವನ ನೀಡುವ ಸಾಧನವಾಗುತ್ತಾಳೆಯೇ ಹೊರತು ಬೇರೆ ಯಾವ ವಿಷಯದ ಬಗ್ಗೆಯೂ ವಿಚಾರಿಸುವುದೂ ಇಲ್ಲ. ವಿಟ್ಠುಪೈ ಏಕಾಏಕಿ ಊರು ಬಿಡುವ ಸಂದರ್ಭ ಬಂದಾಗ ದುಃಖಿತಳಾದರೂ "ಬಹುಶಃ ನಿನ್ನ ಯೋಚನೆಯೇ ಸರಿ. ನಿನ್ನ ಬಂಧುಬಾಂಧವರ ಜೊತೆಗಿರುವುದು, ಅವರ ರಕ್ಷಣೆಯ ಭಾರ ಹೊರುವುದು ನೀನು ಬೆಳೆದು ಬಂದ ಸಮಷ್ಟಿ ಸಮಾಜ ಹೇಳಿಕೊಟ್ಟ ಪಾಠ" [ಸ್ವಸಾ. ಪುಟ ೧೫೦] ಎನ್ನುವುದು ಆಕೆಯ ಪಾತ್ರಕ್ಕೆ ಹಿರಿಮೆಯನ್ನು ತಂದಿದೆ. ಏಕೆಂದರೆ ವಿಟ್ಠುಪೈ ಹಲವಾರು ಸಲ ತಾನು ಮತಾಂತರಗೊಂಡು ಅಲ್ವೀರಾಳ ಜೊತೆ ಇದ್ದು ಬಿಡಲೇ ಎಂದು ಯೋಚಿಸಿರುತ್ತಾನೆ. ಒಂದು ವೇಳೆ ಅವನ ವಿದಾಯದ ಸಮಯದಲ್ಲಿ ಅಲ್ವೀರಾ ಮತಾಂತರದ ಮಾತೆತ್ತಿದ್ದರೆ ಹಾಗೆಯೇ ಮಾಡಿಬಿಡುತ್ತಿದ್ದನೋ ಏನೋ ! ಆದರೆ ಅಲ್ವೀರಾ ಆ ಮಾತನ್ನೇ ಎತ್ತದೆ ಅದಕ್ಕೆ ಅವಕಾಶವನ್ನೇ ನೀಡುವುದಿಲ್ಲ.

"ಗೋವೆಗೆ ಹೋಗುತ್ತೇನೆ. ಚರ್ಚು ಸೇರಿ ಸಂನ್ಯಾಸಿಯಾಗುತ್ತೇನೆ. ಮನುಷ್ಯಳಾಗಿ ಹುಟ್ಟಿದ್ದಕ್ಕೆ ನಾನೂ ಸಮಾಜಕ್ಕಾಗಿ ದುಡಿದು ಸಾರ್ಥಕವಾಗುತ್ತೇನೆ" [ಸ್ವಸಾ. ಪುಟ ೧೫೦] ಎನ್ನುವ ಅಲ್ವೀರಾಳ ಬಗ್ಗೆ ವಿಟ್ಠುಪೈ ಮಾತ್ರವಲ್ಲ, ಓದುಗರೂ ಗೌರವ ಭಾವನೆ ತಾಳುವಂತೆ ಮಾಡುತ್ತದೆ.



## ಅಧ್ಯಾಯ – ೬

# ಮತಾಂತರ ಸಾರ್ವಕಾಲಿಕ ಬಹುಮುಖತೆ

'ಧರ್ಮ' ಎಂಬ ಪರಿಕಲ್ಪನೆ ಸಾವಿರಾರು ವರ್ಷಗಳ ಹಿಂದೆ ಆಫ್ರಿಕಾದಲ್ಲಿ ಹುಟ್ಟಿತು ಎನ್ನಲಾಗಿದೆ. ಆದಿಮಾನವನು ಕಾಲಕ್ರಮೇಣ ತನ್ನ ಬುದ್ಧಿಶಕ್ತಿಯು ಬೆಳೆಯುತ್ತಾ ಹೋದಂತೆ ತನ್ನ ಸುರಕ್ಷತೆಗಾಗಿ ಸುತ್ತಲಿನ ಪರಿಸರವನ್ನು ಕೂಲಂಕಷವಾಗಿ ಗಮನಿಸುತ್ತಾ ಹೋದನು. ಪ್ರಕೃತಿಯ ಸ್ವಾಭಾವಿಕ ಏರುಪೇರುಗಳು ಆತನನ್ನು ಭಯಭೀತನನ್ನಾಗಿಸಿದುವು. ಗುಡುಗು–ಮಿಂಚುಗಳ, ಋತುಮಾನಗಳ ಬದಲಾವಣೆಯ ಕಾರಣವನ್ನರಿಯದ ಆತ ಅವುಗಳ ಹಿಂದೆ ಯಾವುದೋ ಒಂದು ನಿಗೂಢ ಶಕ್ತಿಯ ಕೈವಾಡವಿದೆ ಎಂದರಿತು ಪ್ರಕೃತಿಯನ್ನು ಆರಾಧಿಸಲು ಪ್ರಾರಂಭಿಸಿದನು. ಹಾಗೆಯೇ ಪ್ರಾಣಿ ಪಕ್ಷಿಗಳ ಆಕ್ರಮಣದಿಂದ ತೊಂದರೆಯುಂಟಾದಾಗ ಅವುಗಳನ್ನು ಸಂತುಷ್ಟಗೊಳಿಸಲು ಪೂಜಿಸಲಾರಂಭಿಸಿದನು. ಹೀಗೆ ಕೆಲವು ರೀತಿ ರಿವಾಜುಗಳು ಬಳಕೆಗೆ ಬರಲಾರಂಭಿಸಿದುವು.

ಸುರಕ್ಷತೆಯ ಕಾರಣದಿಂದ ಗುಂಪುಗಳಲ್ಲಿ ಜೀವಿಸಲಾರಂಭಿಸಿದ ಮಾನವರು ತಮ್ಮದೇ ಆದ ತಂಡವನ್ನು ಕಟ್ಟಿಕೊಂಡು ತಾವೇ ಸೃಷ್ಟಿಸಿದ ನೀತಿ–ನಿಯಮಗಳನ್ನು ರೂಢಿಸಿಕೊಂಡು ನಿರ್ದಿಷ್ಟ ಸ್ಥಳಗಳಲ್ಲಿ ವಾಸಿಸಲಾರಂಭಿಸಿದರು. ಬರಬರುತ್ತಾ ಅವರು ಪಾಲಿಸುತ್ತಿದ್ದ ಕಟ್ಟಳೆಗಳೇ ಸಂಪ್ರದಾಯಗಳಾಗುತ್ತಾ ಬೆಳೆದು ಅದೇ ಒಂದು ಧರ್ಮವಾಗಿ ಮಾರ್ಪಟ್ಟಿತು. ತಮ್ಮ ತಂಡವನ್ನು ವಿಸ್ತರಿಸಿಕೊಳ್ಳುತ್ತಾ ಒಬ್ಬ ಮುಖಂಡನನ್ನಾರಿಸಿಕೊಂಡು ಹಲವಾರು ವಿಧದ ಆಯುಧಗಳನ್ನು ತಯಾರಿಸಿ ಶಕ್ತಿಯುತವಾಗಿ ಸದೃಢಗೊಂಡ ತಂಡಗಳು ಬೇರೆ ತಂಡಗಳ ಮೇಲೆ ದಾಳಿ ನಡೆಸಿದುವು. ಈ ಸಂಘರ್ಷದಲ್ಲಿ ಜಯಗಳಿಸಿದ ತಂಡವು ಸೋತ ತಂಡದವರು ಸಹ ತಾವು ಪಾಲಿಸುತ್ತಿರುವ ಧರ್ಮವನ್ನೇ ಅನುಸರಿಸಬೇಕಾಗಿ ಕಡ್ಡಾಯಗೊಳಿಸಲಾರಂಭಿಸಿದರು. ಹೀಗೆ ಪ್ರಪಂಚಾದ್ಯಂತ ವಿವಿಧ ಧರ್ಮಗಳು ತಲೆಎತ್ತಿದುವು ಹಾಗೆ ಕೆಲವು ಧರ್ಮಗಳು ತಮ್ಮ ಬಲಪ್ರದರ್ಶನದಿಂದ ಪ್ರಬಲವಾಗ ತೊಡಗಿದವು.

ಭಾರತ ದೇಶದ ಧಾರ್ಮಿಕ ಪರಂಪರೆ ಬಹುದೊಡ್ಡದು. ಕ್ರಿ.ಪೂ. ನಾಲ್ಕು ಸಾವಿರ ವರ್ಷಗಳ ಹಿಂದಿನ ಮೊಹೆಂಜೋದಾರೋ ಹರಪ್ಪ ಸಂಸ್ಕೃತಿಗಳ ಒಡಲೊಳಗೆ

ಹಲವಾರು ಧರ್ಮಗಳು ಇದ್ದುದನ್ನು ಸಂಶೋಧಕರು ಕಂಡುಹಿಡಿದಿದ್ದಾರೆ. ಚಾರ್ವಾಕ– ಬೌದ್ಧ – ಜೈನ – ಶೈವ – ವೈಷ್ಣವ – ವೀರಶೈವ – ದ್ವೈತ – ಅದ್ವೈತ – ವಿಶಿಷ್ಟಾದ್ವೈತ – ಶಿಖ್ ಮುಂತಾದ ಅನೇಕ ಧರ್ಮಗಳು ಈ ದೇಶದ ಜನಸಮುದಾಯದಲ್ಲಿ ಕಾಣಬಹುದು. ಆಯಾ ಜನಾಂಗದ ಸಂಸ್ಕೃತಿಯ ಮೂಲ ಆಕರಗಳಾಗಿ ಆಯಾ ಧರ್ಮಗಳು ಕಾರ್ಯ ನಿರ್ವಹಿಸಿವೆ. ಇವುಗಳ ಜೊತೆಗೆ ಹೊರದೇಶಗಳಿಂದ ಬಂದ ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮಗಳು ಸಹ ತಮ್ಮದೇ ಆದ ಪರಂಪರೆಯನ್ನು ರೂಪಿಸಿಕೊಂಡಿವೆ. 'ಆಕಾಶಾತ್ ಪತಿತಂ ತೋಯಂ ಯಥಾಗಚ್ಛತಿ ಸಾಗರಂ' ಎಂಬಂತೆ ಎಲ್ಲಾ ಧರ್ಮಗಳ ಮೂಲ ಉದ್ದೇಶವೂ ಒಂದೇ ಎಂಬ ತತ್ವವನ್ನನುಸರಿಸಿ 'ಭಿನ್ನತೆಯಲ್ಲಿ ಏಕತೆ'ಯನ್ನು ಕಾಣುವುದೇ ಭಾರತ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಆದರೆ ನೂರಾರು ವರ್ಷಗಳಿಂದಲೂ 'ಮತಾಂತರ' ಎಂಬ ಪಿಡುಗು ಆಗಾಗ ನಮ್ಮ ಸಂಸ್ಕೃತಿಯ ಮೂಲ ಬೇರುಗಳನ್ನೇ ಅಲ್ಲಾಡಿಸಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದು.

'ಸ್ವಪ್ನ ಸಾರಸ್ವತ' ಕಾದಂಬರಿಯಲ್ಲಿ ಸಾರಸ್ವತ ಸಮುದಾಯದ ವಲಸೆ ಪ್ರಕ್ರಿಯೆ ಪ್ರಾರಂಭವಾಗಲು ಮತಾಂತರದ ಭೀತಿಯೇ ಪ್ರಮುಖ ಕಾರಣವಾಗುತ್ತದೆ. ಗೋವೆಗೆ ಪೋರ್ಚುಗೀಸರ ಆಗಮನವಾಗುವ ಮೊದಲು ಸಹ ಮುಸ್ಲಿಮರು ಸ್ಥಳೀಯರನ್ನು ಮತಾಂತರಗೊಳಿಸುವ ಕಾರ್ಯ ನಡೆಸಿದರೂ, ಪೋರ್ಚುಗೀಸರ ಆಡಳಿತದಲ್ಲಿ 'ಮತಾಂತರ' ಒಂದು ಭೀಕರ ಕ್ರೌರ್ಯವಾಗಿ ಗೋವೆಯ ಜನರನ್ನು ಕಾಡಲಾರಂಭಿಸುತ್ತದೆ.

ಅಪೋನ್ಸೊ–ದ–ಅಲ್ಬುಕೇರ್ಕ ಸ್ಥಳೀಯ ಮುಖಂಡ ತಿಂಮೋಜನ ಸಹಕಾರದಿಂದ ಮುಸ್ಲಿಮರನ್ನು ಗೋವೆಯಿಂದ ಹೊಡೆದೋಡಿಸಿ ಗೋವೆಯ ಆಡಳಿತವನ್ನು ಕೈಗೆತ್ತಿಕೊಳ್ಳುತ್ತಾನೆ. ಅಲ್ಲಿಂದ ಕೆಲವೇ ವರ್ಷಗಳಲ್ಲಿ ತೀಸ್‌ವಾಡಿ, ಸಾಸಷ್ಟಿ, ಬಾರ್ದೇಶ, ವೆರಣೆ ಮುಂತಾದ ಪ್ರಾಂತ್ಯಗಳು ಒಂದೊಂದಾಗಿ ಪೋರ್ಚುಗೀಸರ ವಶವಾಗುತ್ತವೆ. ಪೋರ್ಚುಗೀಸರ ಸಂಖ್ಯೆ ಹೆಚ್ಚಾಗುತ್ತಾ ಹೋದಂತೆ ಅವರ ದಬ್ಬಾಳಿಕೆಯೂ ಹೆಚ್ಚಾಗುತ್ತದೆ. ಹಾಗೆಯೇ ಮತಾಂತರದ ಹೆಸರಿನಲ್ಲಿ ಕ್ರೌರ್ಯವೂ ಹೆಚ್ಚಾಗುತ್ತದೆ. ಸ್ಥಳೀಯ ಜನರಿಗೆ ಅದರಲ್ಲೂ ಸಾರಸ್ವತ ಬ್ರಾಹ್ಮಣರಿಗೆ ತಮ್ಮ ಧರ್ಮವನ್ನು ರಕ್ಷಿಸಿಕೊಳ್ಳುವುದೇ ತಮ್ಮ ಬಾಳಿನ ಮೂಲಧ್ಯೇಯವಾಗುತ್ತದೆ. ಮತಾಂತರದ ಹಾವಳಿಯಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂದು ಜನರು ಅಲ್ಲಲ್ಲಿ ಚರ್ಚೆನಡೆಸುತ್ತಾರೆ.

'ಈಗ ಸಾಸಷ್ಟಿಯಲ್ಲಿ ಅವರ ಅಧಿಕಾರ ಬಂದು ನಾಲ್ಕು ವರ್ಷಗಳಾದುವು. ಮತಾಂತರದ ಕೆಲಸ ಜೋರಾಗಿ ನಡೆಯುತ್ತಿದೆ. ದೈಹಿಕ ಬಲಾತ್ಕಾರದಿಂದ ನೈತಿಕ ದೌರ್ಬಲ್ಯದಿಂದ ಒಳ್ಳೆಯ ಉದ್ಯೋಗಗಳ ಆಸೆಯಿಂದ ಅಂತ ನೂರಾರು ಜನರು ಹೋಗುತ್ತಿದ್ದಾರೆ. ಕೀಳು ಜಾತಿಯ ಜನ, ಕುಡುಂಬಿ ಮಂದಿ ಬಂದು ರುಮಾಲಿನ, ಒಂದು ಅಂಗಿಯ ಅಥವಾ ಇನ್ನಾವುದಾದರೂ ಚಿಕ್ಕ ಪುಟ್ಟ ಬಹುಮಾನದ ಆಸೆಯಿಂದ

ಅವರ ದೇವರ ಶರಣು ಹೊಕ್ಕಿದ್ದಾರೆ. ಹೀಗೆ ಆದರೆ ನಮ್ಮ ಜನ ಒಬ್ಬರೂ ಉಳಿಯುವುದಿಲ್ಲ. [ಸ್ವಸಾ. ಪುಟ ೪೦].

ಅದರಲ್ಲೂ ಫ್ರೈಯರ್ ವಿನ್ಸೆಂಟ್ ಗೋಯೆಸ್ ಎಂಬ ಪೋರ್ಚುಗೀಸ ಅಧಿಕಾರಿ ಗೋವೆಗೆ ಬಂದಿಳಿದಾಗ ಮತಾಂತರದ ಅವಾಂತರ ತಾರಕಕ್ಕೇರುತ್ತದೆ. ಆತ ಗೋವೆಯ ಒಂದೊಂದು ಕುಟುಂಬವನ್ನೂ ಮತಾಂತರ ಮಾಡುವ ಪಣವನ್ನು ತೊಟ್ಟೇ ಬಂದಿರುತ್ತಾನೆ. ದೇವಸ್ಥಾನಗಳೆಂದರೆ, ಪುರೋಹಿತರೆಂದರೆ ಹೇಸಿಗೆ ಪಡುವ ಆತ ಸದಾ ಕೈಯ್ಯಲ್ಲಿ ಬಂದೂಕು ಹಿಡಿದು ಕುದುರೆಯೇರಿ ಊರೂರು ಸುತ್ತುತ್ತಾ ಎಲ್ಲೇ ಯಾವುದೇ ಪೂಜೆ, ಸಮಾರಂಭಗಳು ನಡೆಯುತ್ತಿರಲಿ ಅದನ್ನು ನಿಲ್ಲಿಸಿ ದಾಂಧಲೆ ಎಬ್ಬಿಸುತ್ತಾನೆ. ಪ್ರತಿಭಟಿಸಿದವರನ್ನು ಗುಂಡು ಹಾರಿಸಿ ಸಾಯಿಸಲೂ ಹೇಸುವುದಿಲ್ಲ. ಗೋಯೆಸ್ ಬಂದ ಮೇಲೆ ಗೋವೆಯ ಪ್ರಾಂತ್ಯಗಳಲ್ಲಿ ಅಲ್ಲಲ್ಲಿ ಪ್ರತಿಭಟನೆಯ ಘರ್ಷಣೆಗಳು ಪ್ರಾರಂಭವಾದುವು. ಊರೂರು ಸುತ್ತುತ್ತಾ ಜನರಿಗೆ ಉಪದೇಶ, ಸಾಂತ್ವಾನ ನೀಡುವ ನಾಗ್ಡೊ ಬೇತಾಳ ಸನ್ಯಾಸಿಗೆ ಜನರು ತಾವು ಎದುರಿಸುತ್ತಿರುವ ಕಷ್ಟಗಳ ಬಗ್ಗೆ ತಿಳಿಸಿ ತಮ್ಮನ್ನು ರಕ್ಷಿಸಬೇಕಾಗಿ ಮೊರೆಯಿಡುತ್ತಾರೆ. ನಾಗ್ಡೋ ಬೇತಾಳ ಭವಿಷ್ಯದಲ್ಲಿ ನಡೆಯುವ ದುರ್ಘಟನೆಗಳನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ ಎನ್ನುತ್ತಾನೆ.

"ಫರಂಗಿ ಜನ ನಮ್ಮ ಮೇಲೆ ಬಲಾತ್ಕಾರ ಮಾಡುತ್ತಾರೆ. ಆಮಿಷ ತೋರಿಸುತ್ತಾರೆ ತಾಯಿಯ ಮಡಿಲಲ್ಲಿದ್ದ ಮಕ್ಕಳನ್ನು ಎಳೆದುಕೊಂಡು ಹೋಗುತ್ತಾರೆ. ನಮ್ಮ ನೆಲದ ಮೇಲೆ ನೀರಿನ ಮೇಲೆ ಉಸಿರಿನ ಮೇಲೆ ದೇಹದ ಮೇಲೆ ಅವರು ಪ್ರಭುತ್ವ ಸ್ಥಾಪಿಸುವ ಪ್ರಯತ್ನ ಮಾಡುತ್ತಾರೆ. ಒಂದು ದಿನ ನಮ್ಮ ಭಾಷೆಯನ್ನೂ ಆಡಲಾರಂಭಿಸುತ್ತಾರೆ. ನಾವು ಜಾಗೃತರಾಗಿರುವುದು ಅಗತ್ಯ" ಎಂದ. [ಸ್ವಸಾ. ಪುಟ ೫೫] ತಮ್ಮೆಲ್ಲರ ರಕ್ಷಕನಾದ ಬೇತಾಳ ಸನ್ಯಾಸಿಯೇ ಇಂತಹ ಘೋರ ಭವಿಷ್ಯದ ಮುನ್ಸೂಚನೆ ನೀಡಿದಾಗ ಜನ ಮತ್ತಷ್ಟು ಆತಂಕಗೊಳ್ಳುತ್ತಾರೆ.

ಪೋರ್ಚುಗೀಸರ ಮತಾಂತರದ ಹಾವಳಿ ಹೆಚ್ಚಾಗುತ್ತಲೇ ಹೋದಾಗ ಪ್ರತಿಭಟಿಸಲಾರಂಭಿಸಿದ ಜನರು ಸಂಕ್ವಾಳಿಯ ಕಾಸ್ಟೈಲೋ ಎಂಬ ಪೋರ್ಚುಗೀಸನ ಮೇಲೆ ಹಲ್ಲೆ ನಡೆಸುತ್ತಾರೆ. ಈ ಘಟನೆಯಿಂದ ಗೋಯೆಸ್ ಮತ್ತಷ್ಟು ಉಗ್ರನಾಗುತ್ತಾನೆ. 'ಗೋಯೆಸ್ ಹತ್ತಿಪ್ಪತ್ತು ತರುಣರೊಡನೆ ಕುದುರೆಯ ಮೇಲೆ ಬಂದು ಗ್ರಾಮಪುರುಷನ ಗುಡಿಯನ್ನು ನೆಲಸಮ ಮಾಡಲು ಉದ್ಯುಕ್ತನಾದ. ಕೈಯಲ್ಲಿ ಬಂದೂಕು ಹಿಡಿದು ಬರುವವರನ್ನು ಹೆದರಿಸತೊಡಗಿದ. ಕಾಸ್ಟೈಲೋ ಮೇಲೆ ಸಂಕ್ವಾಳಿಯಲ್ಲಿ ಮಾಡಿದ ಹಲ್ಲೆಯಿಂದಾಗಿ ಅವನಿಗೆ ಸ್ಥಳೀಯರ ಮೋರೆ ಕಂಡೊಡನೆ ಉರಿದು ಬೀಳುವಂತಾಗಿತ್ತು. ಜನ ದಿಗಿಲೆದ್ದರು. ಮಾಳಪ್ಪಯ್ಯ ಮುಂದೆ ಹೋಗಿ ಪ್ರತಿಭಟಿಸಿದರು. ಅವರ ಜೊತೆ ವೆರಣೆಯ ಅನೇಕರೂ ಸೇರಿದ್ದ ಕಾರಣ ಒಂದಷ್ಟು ಗೊಂದಲವಾಯಿತು. ಆದರೆ

ಬಂದೂಕಿನ ಮೇಲೆ ಬೆರಳಿಟ್ಟು ಗೋಯೆಸ್ ಕಿರುಚಾಡಿದ. ಅವರು ಏನು ಮಾಡಿಯಾರು?

* ಕೊಮಿನೋ ಕೊಂದ ಕುಡುಂಬಿಯರ ಹುಡುಗನ ಬಗ್ಗೆಯೂ ಅವರ ನೆನಪು ಹಸಿಯಾಗಿತ್ತು. ಆದುದರಿಂದ ಎಲ್ಲ ತೆಪ್ಪಗಾಗಬೇಕಾಯಿತು. ಕ್ರಿಷ್ಣಶರ್ಮರು ಗೊಳೋ ಎಂದು ಅತ್ತರು. ಗುಡಿಯ ಗೋಡೆಗಳು ಉರುಳಿಬಿದ್ದವು. ಗೋಯೆಸ್ ಗುಂಡುಹಾರಿಸಿ ಗ್ರಾಮಪುರುಷನ ಮೂರ್ತಿಯನ್ನು ಭಗ್ನಗೊಳಿಸಿದ. ನಾಲ್ಕು ಜನ ಪೋರ್ಚುಗೀಸರು ಮೂರ್ತಿಯ ತುಂಡುಗಳನ್ನೆತ್ತಿ ಪುಲ್ಲಾ ನದಿಗೆ ಬೀಸಿ ಒಗೆದರು. ಅವರ ಮುಖದಲ್ಲಿ ತುಂಬಿದ ಕ್ರೌರ್ಯ. ಗೋಯೆಸ್ ಹುಚ್ಚನಂತೆ "ಈ ಕಲ್ಲಿನ ಮೂರ್ತಿಗಳಿಗೆ ಸುತ್ತಿ ಬಂದರೆ ಏನು ಸಿಗುತ್ತದೆ? ಬದಲು ಯೇಸುವನ್ನು ಆರಾಧಿಸಿ. ಬೆಳಗ್ಗೆದ್ದು ಸ್ನಾನ ಮಾಡಬೇಡಿ ಜುಟ್ಟುಗಳನ್ನು ಕತ್ತರಿಸಿ, ಮಾಂಸ ತಿನ್ನಿ, ಮದ್ಯ ಕುಡಿಯಿರಿ, ಸಂಸಾರಿಯಾಗಿ ಮಜಮಾಡಿ. ನಮ್ಮಂತೆ ಕ್ರಿಶ್ಚಿಯನ್ನರಾಗಿರೋ" ಎಂದು ಅರಚಿದ [ಸ್ವಸಾ. ಪುಟ ೫೯]. ಧರ್ಮಾಂಧತೆಯಿಂದ ಹುಚ್ಚನಾಗಿದ್ದ ಗೋಯೆಸ್ ಮದುವೆ, ಮುಂಜಿಗಳನ್ನು ತಡೆಯುವುದಲ್ಲದೆ ಶವಸಂಸ್ಕಾರಗಳೂ ನಡೆಯದಂತೆ ಮಾಡುತ್ತಾನೆ.

'ಆ ವರುಷದ ದೀಪಾವಳಿಯ ದಿನ ಶ್ರೀಧರ ಕಾಳೆಯವರು ತೀರಿಕೊಂಡರು. ತೀರ ಮುದುಕರಾದ ಅವರು ಕಾಷ್ಠದಂತೆ ಒಣಗಿದ್ದರು. ಅವರ ಮಗ ಮಂಗೇಶ ಕಾಳೆ ತೀಸ್‌ವಾಡಿಗೆ ಹೋಗಿ ನೆಲೆಸಿದ್ದ. ಅದು ಅವನ ಹೆಂಡತಿಯ ಊರು. ಅವನು ಅಲ್ಲಿಗೆ ಹೋದರೂ ತಾನು ಹುಟ್ಟಿ ಬದುಕಿದ ಮನೆಯನ್ನೂ ಆಯುರ್ವೇದದ ಪರಿಕರಗಳನ್ನೂ ಬಿಡಲಾಗದೇ ಶ್ರೀಧರ ಕಾಳೆಯವರು ವೆರಣೆಯಲ್ಲೇ ಉಳಿದುಕೊಂಡಿದ್ದರು. ಮಗ ಬರುವ ತನಕ ಶವವನ್ನು ಬಿಡುವಂತಿಲ್ಲ ಎಂದು ಮಾಳಪ್ಪಯ್ಯ ಸಂಸ್ಕಾರದ ಕೆಲಸಗಳಿಗೆ ಕೈ ಹಾಕಿದರು. ಅವರ ಕರ್ಮಗಳಿಗೆ ಕ್ರಿಷ್ಣಶರ್ಮರು ಬಂದರು. ಶವವನ್ನು ಹೊರಗೆ ತಂದು ಹೆಬ್ಬೆರಳನ್ನು ದರ್ಭೆಯಿಂದ ಕಟ್ಟಿ ಮಣ್ಣಿನ ಗಡಿಗೆಯಲ್ಲಿ ಬೆಂಕಿ ಹಾಕುತ್ತಿರುವಾಗ ಗೋಯೆಸ್ ಕುದುರೆಯ ಮೇಲೆ ಅಲ್ಲಿಗೆ ಬಂದ. ಹೆಗಲಿಗೆ ಬಂದೂಕು ಹಾಕಿ, ಹಿಂದೆ ಇಬ್ಬರು ಗುಲಾಮರನ್ನು ಇಟ್ಟುಕೊಂಡು ಕುದುರೆಯೇರಿ ಬಂದವನೇ "ಏ ಮುದುಕಾ, ಇಲ್ಲಿ ನಿನಗೇನು ಕೆಲಸ?" ಎಂದು ಕೇಳಿದ. ಕ್ರಿಷ್ಣ ಶರ್ಮರು ಅವನನ್ನು ನೋಡಿ ತತ್ತರ ನಡುಗಿದರು. ಗೋಯೆಸ್ ಕುದುರೆಯ ಮೇಲೆ ಕುಳಿತೇ ಇದ್ದ. ಅವನ ಮುಖದ ಮೇಲೆ ಕ್ರೌರ್ಯ. ಕ್ರಿಷ್ಣಶರ್ಮರನ್ನು ಕೊಂದುಬಿಡುವ ರೋಷ. ಅದನ್ನು ಕಂಡರೂ ಮಾಳಪ್ಪಯ್ಯ ಕೈಲಿದ್ದ ಗಡಿಗೆಯನ್ನು ನೆಲದ ಮೇಲಿಟ್ಟು ಹೆಗಲಿಗೆ ಹೊದ್ದ ಉತ್ತರೀಯವನ್ನು ಕೆಳಗಿಳಿಸಿ ಧೈರ್ಯದಿಂದ ಕೈ ಜೋಡಿಸಿಕೊಂಡು "ಶವ ಸಂಸ್ಕಾರ ಮಾಡಬೇಕು" ಎಂದರು. ಗೋಯೆಸ್ ಗಹಗಹಿಸಿ ನಕ್ಕ. "ಅದಕ್ಕೆ ನಾನೇಕೆ ಅಡ್ಡಿ ಬರಲಿ ? ಮಾಡಿಕೊಳ್ಳಿ. ಆದರೆ ಈ ಹೇಸಿಗೆಯ ಭೊಟ್ಟನನ್ನು ಮಾತ್ರ ಆಚೆಗೆ ಕಳುಹಿಸಿರಿ" ಎಂದು ಕಿರುಚಿದ. "ಭಟ್ಟರಿಲ್ಲದೆ ಅವರ ಕ್ರಿಯೆಗಳು ನಡೆಯುವುದು ಹೇಗೆ ?" ಎಂದು ಮಾಳಪ್ಪಯ್ಯ ಆತಂಕದಿಂದ

---

* ಅಲೈಕ್ಸೊ ಡಿಯಾಜ್ ಕೊಮಿನೋ ಎಂಬ ಪೋರ್ಚುಗೀಸ ಅಧಿಕಾರಿ ತನ್ನ ಮಾತು ಕೇಳದ ಕುಡುಂಬಿಯ ತರುಣನನ್ನು ಗುಂಡಿಕ್ಕಿ ಕೊಂದಿರುತ್ತಾನೆ. [ಸ್ವಸಾ. ಪುಟ ೪೫]

ಕೇಳಿದರು. ಗೋಯೆಸ್ "ಅವರನ್ನು ನೋಡಿದರೆ ನನಗೆ ಆಗುವುದಿಲ್ಲ. ಮಿಂಗ್ವೇಲ ರಾಜನಿಂದ ನನಗೆ ಅಧಿಕಾರ ಸಿಕ್ಕಿದೆ. ನಿಮ್ಮ ಭೊಟ್ಟರನ್ನೆಲ್ಲ ಗಡಿಪಾರು ಮಾಡುತ್ತೇನೆ. ಪೋರ್ಚುಗೀಸರ ನಾಡಾದ ಸಾಸಷ್ಟಿಯಲ್ಲಿ ನಿಮ್ಮ ಯಾವುದೇ ಆಚಾರಗಳು ನಡೆಯುವುದಿಲ್ಲ. ಅವನು ತಕ್ಷಣ ಇಲ್ಲಿಂದ ಹೋಗಬೇಕು ಇಲ್ಲದಿದ್ದರೆ ಸುಟ್ಟೇ ಬಿಡುತ್ತೇನೆ" ಎಂಬು ಬಂದೂಕಿಗೆ ಕೈಹಾಕಿದ.

ಗೋಯೆಸ್ ಹೆಚ್ಚು ಸಮಯ ಇಂಡಿಯಾದಲ್ಲಿದ್ದುದರಿಂದ ಅವನಿಗೆ ಸ್ಪಷ್ಟವಾಗಿ ಕೊಂಕಣಿ ಭಾಷೆ ಬರುತ್ತಿತ್ತು. ಗೋವಾದ ಕೊಂಕಣಿ ಸೂಳೆಯರೊಂದಿಗೆ ಮಾತಾಡುತ್ತಾ ಅವನ್ನು ಅದನ್ನು ಕಲಿತ್ತಿದ್ದ. ಅವನು ಬಂದೂಕಿಗೆ ಕೈ ಹಾಕಿದಾಗ ಕ್ರಿಷ್ಣ ಶರ್ಮರ ಅಳ್ಕೆದೆ ಹಾರಿ ಅವರು ಮಾಳಪ್ಪಯ್ಯನವರ ಹಿಂದೆ ಅಡಗಿಕೊಳ್ಳಲು ಪ್ರಯತ್ನಿಸಿದರು. ತುಂಬ ಹೊತ್ತಿನ ಮಾತುಕತೆಯ ನಂತರ ಶವಸಂಸ್ಕಾರದಲ್ಲಿ ಕ್ರಿಷ್ಣಶರ್ಮರು ಭಾಗವಹಿಸಕೂಡದೆಂದು ಹೇಳಿದ ಗೋಯೆಸ್ ಶ್ರೀಧರ ಕಾಳೆಯವರ ಶವವನ್ನು ಸ್ಮಶಾನಕ್ಕೆ ಒಯ್ಯಲು ಸಮ್ಮತಿಸಿದ. ಯಾವುದೇ ವಿಧಿವತ್ತಾದ ಸಂಸ್ಕಾರಗಳಿಲ್ಲದೇ ಶ್ರೀಧರ ಕಾಳೆಯವರ ಒಣಗಿದ ಕಾಷ್ಠದಂತಹ ಮೈ ಬೆಂಕಿಯಲ್ಲಿ ಉರಿದು ಹೋಯಿತು. [ಸ್ವಸಾ. ಪುಟ ೬೩]

ಗೋಯೆಸನ ಕ್ರೌರ್ಯ ಹೆಚ್ಚಿದಂತೆ ಮದುವೆ, ಮುಂಜಿಗಳಷ್ಟೇ ಅಲ್ಲದೆ ದಿನನಿತ್ಯದ ದೇವಸ್ಥಾನಗಳ ಪೂಜೆಯೂ ಗುಟ್ಟಾಗಿ ನಡೆಯಲಾರಂಭಿಸಿದುವು.

'ಮಾಳಪ್ಪಯ್ಯ ತೀಸ್‌ವಾಡಿಯ ಚಂದ್ರೇಶ್ವರ ದೇವಸ್ಥಾನಕ್ಕೆ ಹೋದಾಗ ಅಲ್ಲಿ ಭಟ್ಟರನ್ನು ಕಾಣದೆ ಪ್ರಶ್ನಿಸಿದಾಗ ರಂಗ ಶೆಣಾವಿ ಹೇಳುತ್ತಾನೆ. "ಮಾಳಪ್ಪಯ್ಯ, ತೀಸ್‌ವಾಡಿಯಲ್ಲೆಲ್ಲ ಇದೇ ರೀತಿ. ದೇವರ ಪ್ರಸಾದ ಕೊಡಲು ಯಾರೂ ಕುಳಿತುಕೊಳ್ಳುವುದಿಲ್ಲ. ಬ್ರಾಹ್ಮೀ ಮುಹೂರ್ತದಲ್ಲಿ ಗುಟ್ಟಾಗಿ ಬಂದು ಪೂಜೆ ಮುಗಿಸಿ ತಟ್ಟೆ ತೀರ್ಥ ಎಲ್ಲ ಇಟ್ಟು ಹೋಗುತ್ತಾರೆ. ಭಕ್ತರು ಬಂದರೆ ತಾವಾಗಿ ಕೈ ಹಾಕಿ ತೀರ್ಥ ಪ್ರಸಾದ ತೆಗೆದುಕೊಳ್ಳಬೇಕು" ಎಂದರು. [ಸ್ವಸಾ. ಪುಟ ೮೪]

ಬರಬರುತ್ತಾ ಸಾರಸ್ವತ ಬ್ರಾಹ್ಮಣ ಕುಟುಂಬಗಳಲ್ಲಿ ಮದುವೆ ಸಂಬಂಧಗಳನ್ನು ಬೆಳೆಸುವುದೇ ಒಂದು ಸಮಸ್ಯೆಯಾಗಿ ಬಿಟ್ಟಿತು. ಏಕೆಂದರೆ ಬಹುತೇಕ ಕುಟುಂಬಗಳಲ್ಲಿ ಯಾರಾದರೂ ಒಬ್ಬರು ಮತಾಂತರ ಹೊಂದಿದ್ದವರಿದ್ದೇ ಇರುತ್ತಿದ್ದರು. ಯಾವ ಕುಟುಂಬದಲ್ಲಿ ಯಾರೂ ಕಿರಿಸ್ತಾನರಾಗಿಲ್ಲವೋ ಅಂತಹ ಕುಟುಂಬಗಳನ್ನು ಹುಡುಕುವುದೇ ಕ್ಲಿಷ್ಟಕರವಾಯಿತು. ಎಷ್ಟೋ ಮದುವೆಗಳು ವಧು-ವರರು ಮಂಟಪಕ್ಕೆ ಹೋಗುವಷ್ಟರಲ್ಲಿ ಮುರಿದು ಬೀಳುತ್ತಿದ್ದುವು.

'ಜೊನ್ನದ ಗೃಹಸ್ಥರೊಬ್ಬರು "ಬಂದವರು ಮೊದಲು ಬ್ರಾಹ್ಮಣರಾಗೇ ಇದ್ದರು. ಅವರನ್ನು ಬಲವಂತದಿಂದ ಕಿರಿಸ್ತಾನರಾಗಿ ಮಾಡಿದ್ದಾರೆ. ಆದರೂ ಅವರು

ನಡೆದುಕೊಳ್ಳುವುದು ನಮ್ಮ ದೇವರಿಗೇ, ಮನೆಯಲ್ಲಿ ಇನ್ನೂ ಪೂಜೆ ಪುನಸ್ಕಾರ ಅಂತ ನಡೆಯುತ್ತಿದೆ" ಎಂದರು. [ಪುಟ ೮೬]

ಹಾಗೊಂದು ವೇಳೆ ಕುಟುಂಬದ ಯಾರಾದರು ಮತಾಂತರಗೊಂಡು ಮೈಲಿಗೆಯಾಗಿದ್ದರೆ ಶುದ್ಧಿ ಕಾರ್ಯಗಳನ್ನು ಮಾಡಿ ಗುಟ್ಟಾಗಿ ಮದುವೆ ಮಾಡುವಂತೆಯೂ ಇರಲಿಲ್ಲ. ಹೇಗಾದರೂ ವಿಷಯವನ್ನರಿತ ಪೋರ್ಚುಗೀಸರು ಬಂದು ಜನರನ್ನೆಲ್ಲ ಸೆರೆಹಿಡಿದು ಹಿಂಸಿಸಿ ಅವರು ಮತಾಂತರವಾಗುವವರೆಗೂ ಬಿಡುತ್ತಿರಲಿಲ್ಲ. ಹೆಂಗಸರು, ಮಕ್ಕಳು ಕಷ್ಟಪಡುವುದನ್ನು ಸಹಿಸಲಾರದೆ ಗಂಡಸರು ಮೊದಮೊದಲು ಪ್ರತಿಭಟಿಸಿದರೂ ನಂತರ ಅವರ ಸತ್ವ ಉಡುಗಿ ನಿರ್ವೀರ್ಯರಾಗಿ ಜೀವ ಉಳಿದರೆ ಸಾಕು ಎಂದು ಕಿರಿಸ್ತಾನರಾಗಲು ಸಮ್ಮತಿಕೊಟ್ಟು ಬಿಡುತ್ತಿದ್ದರು.

ಮಾಳಪ್ಪಯ್ಯನ ಹೆಂಡತಿ ರಾಧಾಬಾಯಿಯ ಅಣ್ಣ ಲೋಟಲಿಯ ರಾಮನಾಥನ ಕುಳಾವಿಯಾದ ನಿಷ್ಠಾವಂತ ಬ್ರಾಹ್ಮಣ ರಾವುಳು ಕುಡಾವ ಅಲುರೋ-ದ ಅಲ್ಮೈದಾನಾದದ್ದು, ಮತ್ತೊಬ್ಬ ಹತ್ತಿರದ ಸಂಬಂಧಿ ರಂಗಪ್ಪ ಶೆಣಾವಿ ಕಿರಿಸ್ತಾನನಾಗಿದ್ದು ಕೇಳಿ ಮಾಳಪ್ಪಯ್ಯ ದಿಗ್ಭ್ರಾಂತನಾಗುತ್ತಾನೆ.

"ಸುಕ್ಹೊ ಪುರೋಬುವಿನ ಮನೆಯಲ್ಲಿ ಮುಂದುಗಡೆ ಕುಳಿತು ಜೀವ ಕೊಟ್ಟಾದರೂ ಧರ್ಮ ಉಳಿಸಬೇಕು ಎಂದು ಹೇಳಿದ್ದನಲ್ಲ, ಅವನಿಗೇನಾಯಿತು?" ಅಂತ ಮಾಳಪ್ಪಯ್ಯ ಕೇಳಿದರು. ಅನ್ನು ಕಾಮಾತಿ ಖೇದದಿಂದ "ಏನಾಯಿತು ಅಂತ ಯಾರನ್ನು ಕೇಳುವುದು ಮಾಳಪ್ಪಯ್ಯ? ಎಲ್ಲರಿಗೂ ಆದಂತೆ ಅವನಿಗೂ ಆಯಿತು. ಪೋರ್ಚುಗೀಸರ ರಾಜ್ಯ. ಅವರು ಹೇಳಿದಂತೆ ನಾವು ಕೇಳಬೇಕು. ಇದೆಲ್ಲ ನೋಡಿದರೆ ನಮ್ಮ ದಿನಗಳೂ ದೂರವಿಲ್ಲ ಅಂತ ಕಾಣುತ್ತದೆ. ಒಂದೋ ವೆರಣೆಯಲ್ಲಿ ಕಿರಿಸ್ತಾನರಾಗಿರಬೇಕು. ಇಲ್ಲದಿದ್ದರೆ ಈ ದೇಶ ಬಿಟ್ಟು ಬ್ರಾಹ್ಮಣರಾಗಿ ಉಳಿಯಬೇಕು" ಎಂದ. [ಸ್ವಸಾ. ಪುಟ ೯೧]

ವಿಟ್ಠು ಪೈನಿಗೆ ಹದಿನೈದು ವರ್ಷಗಳಾದಾಗ ಆತನ ಮದುವೆ ಮಾಡಲು ನಿರ್ಧರಿಸಿ ಮರ್ತುಕಾಮಾತಿಯ ಮಗಳು ರಕುಮಾಯಿಯ ಜೊತೆ ವಿಟ್ಠು ಪೈನ ನಿಶ್ಚಿತ ಮಾಡಿಸುತ್ತಾರೆ. ಆದರೆ ಮರ್ತುಕಾಮಾತಿಯು ಇಡೀ ಕುಟುಂಬದೇ ಮತಾಂತರಗೊಂಡಾಗ ವಿಟ್ಠುಪೈಯ ಮದುವೆ ಮುರಿದುಬಿದ್ದು ಅದೇ ಕೊರಗಿನಲ್ಲಿ ವಿಟ್ಠುಪೈಯ ತಾಯಿ ರಾಧಾಬಾಯಿ ತೀರಿಹೋಗುತ್ತಾಳೆ. ಹೀಗೆ ಮತಾಂತರದ ಪೆಡಂಭೂತ ಸಾರಸ್ವತ ಬ್ರಾಹ್ಮಣರನ್ನು ಎಡೆಬಿಡದೆ ಕಾಡಲಾರಂಭಿಸುತ್ತದೆ.

ಕೊನೆಗೂ ಮಾಳಪ್ಪಯ್ಯ ಗೋವೆಯ ಅಪ್ಪಣಭಟ್ಟರ ಮಗಳು ತುಳಸೀಬಾಯಿಯ ಜೊತೆ ವಿಟ್ಠುಪೈಯ ಮದುವೆ ಮಾಡಿಸಿ ನಿರಾಳವಾಗುತ್ತಾರೆ. ವಿಟ್ಠುಪೈ ಮನೆಯ ಜವಾಬ್ದಾರಿಯನ್ನು ಹೊತ್ತು ಎಲ್ಲರ ಕಷ್ಟ-ಸುಖಗಳಿಗೆ ನೆರವಾಗುತ್ತಾ ಎಲ್ಲರಿಗೂ

ಬೇಕಾದವನಾಗಿರುತ್ತಾನೆ. ಆದರೆ ಆತನ ಮೊದಲನೇಯ ಮಗ ನಾಗಪ್ಪಯ್ಯ ಐದು ವರ್ಷದವನಾಗುತ್ತಿದ್ದಂತೆಯೇ ತುಳಸೀಬಾಯಿಯ ತಂದೆ ಅಪ್ಪಣಭಟ್ಟರು ಮತಾಂತರದ ಭೀತಿಯಿಂದ ಗೋವೆಯಿಂದ ಕುಟುಂಬ ಸಮೇತ ಭಟ್ಕಳಕ್ಕೆ ಹೊರಟುನಿಂತಾಗ ಮತಾಂತರದ ಬಿಸಿ ವಿಟ್ಠುಪೈಯ ಮನೆಗೂ ತಟ್ಟುತ್ತದೆ.

ರಾಚೋಲಿ, ನೇವಲಿ ಪ್ರಾಂತ್ಯಗಳಲ್ಲಿ ಎಲ್ಲಾ ದೇವಸ್ಥಾನಗಳನ್ನೂ ರಾಡ್ರಿಗಸ್ ಎಂಬ ಪೋರ್ಚುಗೀಸ ಅಧಿಕಾರಿ ನಾಶಪಡಿಸುತ್ತಾನೆ. ಬಹುತೇಕ ಕುಟುಂಬಗಳು ಬೇರೆದಾರಿಯಿಲ್ಲದೆ ಮತಾಂತರಗೊಂಡರೆ ಕೆಲವು ಕುಟುಂಬಗಳು ಅಲ್ಲಿಂದ ಓಡಿಹೋಗುತ್ತಾರೆ. ಗೋಯೆಸ್ ಮುದುಕನಾಗಿದ್ದರೂ ಆತನ ಮತಾಂಧತೆಯ ಹುಚ್ಚು ಕುಗ್ಗಿರುವುದಿಲ್ಲ. ಆತ ವೆರಣೆಯ ದೇವಸ್ಥಾನಗಳನ್ನು ನಾಶಪಡಿಸಲು ಫರಂಗಿ ಸೈನ್ಯದ ಜೊತೆಗೆ ಸಜ್ಜಾಗುತ್ತಾನೆ. ಜನರೆಲ್ಲ ನಾಗ್ಡೊ ಬೇತಾಳನ ಸಲಹೆ ಕೇಳಲು ಮಾಳಶಿಮಾಂಯಿಯ ದೇವಸ್ಥಾನದ ಹತ್ತಿರ ಸೇರುತ್ತಾರೆ. ಅಷ್ಟರಲ್ಲಾಗಲೇ ನಾಗ್ಡೊ ಬೇತಾಳ ಧಡ್ಡನ ಮೂಲಕ ದೇವಿಯ ಮೂರ್ತಿಯನ್ನು ಅಡಗಿಸಿಟ್ಟಿರುತ್ತಾನೆ. ಮೂರ್ತಿಯನ್ನು ಕಾಣದೆ ರೊಚ್ಚಿಗೆದ್ದ ಪೋರ್ಚುಗೀಸರು ವಿಟ್ಠುಪೈಯೂ ಸೇರಿದಂತೆ ಊರಿನ ಗಂಡಸರನ್ನೆಲ್ಲಾ ಸೆರೆಹಿಡಿದು ಚಿತ್ರಹಿಂಸೆ ಕೊಡುತ್ತಾರೆ. ಛಿದ್ರವಾದ ದೇಹದ ನೋವನ್ನು ಸಹಿಸಲಾರದೆ ವಿಟ್ಠುಪೈ ಧಡ್ಡನ ಹೆಸರನ್ನು ಹೇಳಿ ಬಿಡುತ್ತಾನೆ. ನಂತರ ಧಡ್ಡನನ್ನು ಭೀಕರವಾಗಿ ಕೊಲೆ ಮಾಡಲಾಗುತ್ತದೆ. ಹೀಗೆ ವಿಟ್ಠುಪೈಯ ಜೀವದ ಗೆಳೆಯ ಧಡ್ಡ ಧರ್ಮ ರಕ್ಷಣೆಗಾಗಿ ಮತಾಂತರದ ಭೂತಕ್ಕೆ ಬಲಿಯಾಗುತ್ತಾನೆ.

ವಿಟ್ಠುಪೈಯ ಮೇಲೆ ಕೋಪಗೊಂಡ ನಾಗ್ಡೊ ಬೇತಾಳ ಆತನಿಗೆ ಶಾಪಕೊಡುತ್ತಾನೆ. "ನಿನ್ನ ಜೀವ ಉಳಿಸುವ ಸಲುವಾಗಿ ನೀನು ಧಡ್ಡನನ್ನು ಬಲಿಕೊಟ್ಟೆಯಲ್ಲವೇ ವಿಟ್ಠುಪೈ ? ನಿನ್ನಿಂದಾಗಿ ಈ ಎಲ್ಲ ಜನರೂ ಊರು ಬಿಡಬೇಕಾಗಿ ಬಂದಿದೆ. ಇಗೋ, ಈ ಕ್ಷಣದಿಂದ ನಿನಗೆ ಮ್ಹಾಳಶಿಮಾಂಯಿಯ ಪೂಜೆ ಮಾಡುವ ಹಕ್ಕಿಲ್ಲ. ಈ ವೆರಣೆಯ ನೀರು ನಿನಗೂ ನಿಷಿದ್ಧ. ನಿನ್ನ ಸಂತಾನ ನಾಲ್ವರಲ್ಲಿ ಒಂದಂತೆ ನಿಶ್ಶೇಷ್ಯವಾಗಿ ಹೋಗಲಿ" [ಸ್ವಸಾ. ಪುಟ ೧೪೭]. ಹೀಗೆ ಗೋವೆಯಿಂದ ಸಾರಸ್ವತ ಬ್ರಾಹ್ಮಣರ ವಲಸೆ ಪ್ರಕ್ರಿಯೆಗೆ ಮತಾಂತರದ ಕ್ರೌರ್ಯವೇ ಕಾರಣವಾಗುತ್ತದೆ.

*** ಇನ್‌ಕ್ವಿಸಿಷನ್**

ಕ್ರೈಸ್ತ ಧರ್ಮದ ಕೆಲವು ಕಟ್ಟಾ ಸಂಪ್ರದಾಯವಾದಿಗಳ ಮತಾಂಧತೆಯ ಅತಿರೇಕವೇ ಇನ್‌ಕ್ವಿಸಿಷನ್ ಎಂಬ ಘೋರ ಶಿಕ್ಷೆ. ಕ್ರೈಸ್ತ ಧರ್ಮಕ್ಕೆ ಮತಾಂತರ ಗೊಂಡವರಾಗಲಿ, ಮೂಲತಃ ಕ್ರಿಶ್ಚಿಯನ್ನರೇ ಇರಲಿ ಕ್ರೈಸ್ತ ಧರ್ಮದ ಆಚಾರ–ವಿಚಾರಗಳ ಪಾಲನೆಯಲ್ಲಿ ಕಿಂಚಿತ್ ತಪ್ಪಿದರೂ ಅಂತಹವರನ್ನು ಭೀಕರ ಶಿಕ್ಷೆಗೆ ಒಳಪಡಿಸಲಾಗುತ್ತಿತ್ತು.

---

* www.wikipedia.portuguese_empire

ಇನ್‌ಕ್ವಿಸಿಷನ್ ೧೪೮೦ರಲ್ಲಿ ಕ್ಯಾಥೊಲಿಕ್ ದೊರೆ ಆರಾಗನ್‌ನ ಎರಡನೇಯ ॥ ಹಾಗೂ ಕ್ಯಾಸ್ಟಾಲಿನ ಇಸಾಬೆಲ್ಲಾ ಇವರ ಆಳ್ವಿಕೆಯಲ್ಲಿ ಮೊದಲಿಗೆ ಸ್ಪೇನ್ ದೇಶದಲ್ಲಿ ಪ್ರಾರಂಭವಾಯಿತು. The tribunal of the Holy office of the Inquisition ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಇನ್‌ಕ್ವಿಸಿಷನ್‌ನ ನಿಯಮಗಳ ಆಜ್ಞೆಯನ್ನು ಹೊರಡಿಸಲಾಯಿತು. ಸ್ಪೇನ್‌ನಲ್ಲಿ ನೆಲೆಸಿದ್ದ ಯಹೂದಿಯರನ್ನು ಹಾಗೂ ಮುಸಲ್ಮಾರನ್ನು ಕಡ್ಡಾಯವಾಗಿ ಕ್ರೈಸ್ತ ಮತಕ್ಕೆ ಬಲವಂತದಿಂದ ಹೆದರಿಸಿ ಬೆದರಿಸಿ ಮತಾಂತರ ಮಾಡಲಾಯಿತು. ಹೀಗೆ ಮತಾಂತರವಾದವರು ತಮ್ಮ ಮೂಲ ಧರ್ಮವನ್ನು ಗುಟ್ಟಾಗಿ ಪಾಲಿಸುತ್ತಿರುವುದು ಕಂಡುಬಂದರೆ ಅವರನ್ನು ಬಂಧಿಸಿ ನಾನಾವಿಧದ ಚಿತ್ರಹಿಂಸೆಗೆ ಒಳಪಡಿಸಲಾಗುತ್ತಿತ್ತು. ಅವರ ಆಸ್ತಿ ಪಾಸ್ತಿಗಳನ್ನು ಸಹ ಜಪ್ತಿ ಮಾಡಿ ಕುಟುಂಬದವರನ್ನು ಸಹ ಹಿಂಸಿಸಲಾಗುತ್ತಿತ್ತು.

ಗಾರ್ಸಿಯಾ ಕಾರ್ಸೆಲ್ ಎಂಬ ಸಂಶೋಧಕರು ಇನ್‌ಕ್ವಿಸಿಷನ್ ಹೆಸರಿನಲ್ಲಿ ನಡೆಯುತ್ತಿದ್ದ ಕ್ರೌರ್ಯದ ಬಗ್ಗೆ ಬರೆಯುತ್ತಾ ಈ ಹಿಂಸೆಗೊಳಲ್ಪಟ್ಟ ವ್ಯಕ್ತಿಗಳು ಸಾವಿಗಾಗಿ ಮೊರೆ ಇಡುತ್ತಿದ್ದರು ಎಂದಿದ್ದಾರೆ. ಒಂದು ಚಿಕ್ಕ ಕೋಣೆಯಲ್ಲಿ ಹತ್ತಾರು ಜನರನ್ನು ತುರುಕಿಸಿ ಅಲ್ಲಿ ಏಳಲೂ ಆಗದೆ ಕೂರಲೂ ಆಗದೆ ನರಳುತ್ತಾ ದಿನಕಳೆಯಬೇಕಾಗುತ್ತಿತ್ತು. ಸೂರಿನಲ್ಲಿದ್ದ ಚಿಕ್ಕ ಕಿಂಡಿಯಿಂದ ಬರುವ ಗಾಳಿ ಬೆಳಕೇ ಅವರಿಗೆ ಆಧಾರ. ಭರ್ಜಿ ಈಟಿಗಳಿಂದ ಚುಚ್ಚಿ ದೇಹವನ್ನು ಘಾಸಿಗೊಳಿಸಲಾಗುತ್ತಿತ್ತು. ಅಪರಾಧ ಸಾಬೀತಾದ ಮೇಲೆ ಶಿಕ್ಷೆಗೆ ಒಳಪಟ್ಟವರನ್ನು ನಗರದ ಮಧ್ಯೆ ಮೆರವಣಿಗೆ ಮಾಡಿ, ಸಾರ್ವಜನಿಕರ ಮುಂದೆ ಕಂಬಗಳಿಗೆ ಕಟ್ಟಿ ಹಾಕಿ ಬೆಂಕಿ ಹಚ್ಚಿ ಸಜೀವ ದಹನ ಮಾಡುತ್ತಿದ್ದರು.

ಸ್ಪೇನ್‌ನಲ್ಲಿ ಚಾಲನೆಯಲ್ಲಿದ್ದ ಇನ್‌ಕ್ವಿಸಿಷನ್ ಪೋರ್ಚುಗಲ್ಲಿಗೆ ೧೫೧೫ರಲ್ಲಿ ದೊರೆ ಒಂದನೇಯ ಜೋ ಮ್ಯಾನ್ಯುಮೆಲ್ ಸ್ಪೇನಿನ ಆರ್ಗನ್ ನಗರದ ಮಾರಿಯಾಳನ್ನು ಮದುವೆಯಾಗುವುದರ ಮೂಲಕ ಪೋರ್ಚುಗೀಸಿಗೂ ತಲುಪಿತು. ಹಾಗೆಯೇ ಭಾರತ ದೇಶದ ಗೋವಾ ಪ್ರಾಂತ್ಯವನ್ನು ಪೋರ್ಚುಗೀಸರು ಸಂಪೂರ್ಣ ವಶಪಡಿಸಿಕೊಂಡ ಮೇಲೆ ೧೫೬೦ರಲ್ಲಿ ಆಗಿನ ಸೇನಾಧಿಕಾರಿಗಳಾದ ಅಲೆಕ್ಸಿಯೋ–ಡಿಯಾಸ್–ಫ್ಯಾಲ್ಕೊ ಮತ್ತು ಫ್ರಾನ್ಸಿಸ್ಕೊ ಮರ್ಕಿಸ್ ಗೋವಾದಲ್ಲೂ ಸಹ ಇನ್‌ಕ್ವಿಸಿಷನ್ ಆಜ್ಞೆಯನ್ನು ಹೊರಡಿಸಿದರು. 'ಸ್ವಪ್ನ ಸಾರಸ್ವತ'ದಲ್ಲಿ "ರಾವುಳ ಕುಡಾವನನ್ನೂ ಅವನ ಮಗನನ್ನೂ ಇನ್‌ಕ್ವಿಸಿಷನ್‌ರವರು ಹಿಡಿದುಕೊಂಡು ಹೋಗಿದ್ದಾರೆ" ಎಂದು ವಿಟ್ಠುಪೈಗೆ ಹೇಳಲು ಬಂದ ಹುಡುಗ ಅಲ್ಲೇ ಅಸುನೀಗುತ್ತಾನೆ. ಈ ವಿಷಯ ತಿಳಿದಾಗ ನಾಗ್ಡೋ ಬೇತಾಳ ವಿಷಾದದಿಂದ "ರಾವುಳು ಪಡಾವನ ಅಂತ್ಯ ಭೀಕರವಾಗುತ್ತದೆ, ಆ ಸಾವು ಯಾರೊಬ್ಬರಿಗೂ ಬರಬಾರದು" [ಪುಟ ೧೪೯] ಎನ್ನುವುದು ಇನ್‌ಕ್ವಿಸಿಷನ್ ಘೋರತೆಯನ್ನು ತಿಳಿಸುತ್ತದೆ. ಹೀಗೆ ಮತಾಂತರವಾದವರಿಗೂ ಕಷ್ಟ ತಪ್ಪುವುದಿಲ್ಲ. ಮೊದಲೇ ಮತಾಂತರದ ಆವಾಂತರದಿಂದ ಬೆದರಿದ್ದ ಗೋವೆಯ ಜನರು ನಂತರ ಇನ್‌ಕ್ವಿಸಿಷನ್ ಶಿಕ್ಷೆಯ ಕ್ರೌರ್ಯಕ್ಕೆ ತತ್ತರಿಸುವಂತಾಗುತ್ತದೆ.

---

೧೫೩೦ರವರೆಗೂ ಹೆಚ್ಚು ಚಾಲ್ತಿಯಲ್ಲಿದ್ದ ಇನ್‌ಕ್ವಿಸಿಷನ್ ಶಿಕ್ಷೆಗೆ ಒಳಗಾಗಿ ಸಾವಿರಾರು ಜನ ಪ್ರಾಣ ತೆತ್ತಿದ್ದರು. ನಂತರ ಬ್ರಿಟನ್ನಿನ ವಿರೋಧ ಕಟ್ಟಿಕೊಂಡ ಪೋರ್ಚುಗಲ್ಲಿನ ಪ್ರಬಲತೆ ಕ್ಷೀಣಿಸತೊಡಗಿತು. ತದನಂತರ ಪೋಪ್‌ರವರ ಆದೇಶದ ಮೇರೆಗೆ ಇನ್‌ಕ್ವಿಸಿಷನ್ ಶಿಕ್ಷೆಯನ್ನು ನಿಲ್ಲಿಸಲಾಯಿತು.

೧೬೮೩ರಲ್ಲಿ ಮರಾಠರು ಗೋವೆಯ ಮೇಲೆ ದಾಳಿ ನಡೆಸಲಾರಂಭಿಸಿದರು. ಅಂದಿನಿಂದ ತಮ್ಮ ರಾಜ್ಯಭಾರವನ್ನು ಉಳಿಸಿಕೊಳ್ಳಲು ಸೆಣಸಾಡಲಾರಂಭಿಸಿದ ಪೋರ್ಚುಗಲ್ ಮತಾಂತರ ಹಾಗೂ ಇನ್‌ಕ್ವಿಸಿಷನ್‌ನತ್ತ ಗಮನನೀಡಲಾಗಲಿಲ್ಲ. ೧೭೪೧ರಲ್ಲಿ ಮರಾಠರು ಬಾರ್ದೇಶ ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ವಶಪಡಿಸಿಕೊಂಡಾಗ ಹಿಂದುಗಳು ನಿರಾಳಗೊಂಡರು. ಮತಾಂತರವಾದವರು ಸಹ ಶುದ್ಧಿಗೊಂಡು ತಮ್ಮ ಮೂಲ ಧರ್ಮವನ್ನು ಪಾಲಿಸಲಾರಂಭಿಸಿದರು.

## ಧರ್ಮ ರಕ್ಷಣೆಗಾಗಿ ನಡೆದ ಯಹೂದಿಯರ ವಲಸೆ

ಸಾವಿರಾರು ವರ್ಷಗಳಿಂದಲೂ ಧರ್ಮರಕ್ಷಣೆಯ ಕಾರಣಕ್ಕಾಗಿ ಹಾಗು ಮತಾಂತರದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಘರ್ಷಣೆಗಳು, ವಲಸೆಗಳು ನಡೆಯುತ್ತಲೇ ಬಂದಿವೆ. ಅದರಲ್ಲೂ ಧಾರ್ಮಿಕ ಕಾರಣಕ್ಕಾಗಿ ಯಹೂದಿಯರಲ್ಲಿ ಬೃಹತ್ ಸಂಖ್ಯೆಯಲ್ಲಿ ನಡೆದ ವಲಸೆಯಂತೆ ಬಹುಶಃ ಬೇರಾವ ಧರ್ಮದಲ್ಲೂ ನಡೆದಿಲ್ಲ. ಇಂದಿಗೂ ಕ್ರಿಶ್ಚಿಯನ್ ಹಾಗೂ ಯಹೂದಿಯರ ಮಧ್ಯೆ ಘರ್ಷಣೆಗಳು ಅಲ್ಲಲ್ಲಿ ನಡೆಯುತ್ತಲೇ ಇರುತ್ತವೆ. ಯಹೂದಿಯರು ತಮ್ಮದೇ ಆದ ಒಂದು ಸ್ಥಳದಲ್ಲಿ ಸ್ವತಂತ್ರವಾಗಿ ನೆಲೆಯೂರಲು ಸಾಧ್ಯವಾಗಿಲ್ಲ.

* ಮೂಲತಃ ಯಹೂದಿಯರು ಇಸ್ರೇಲಿನ ನಿವಾಸಿಗಳು. ಮೆಡಿಟರೇನಿಯನ್ ಸಮುದ್ರ ಹಾಗೂ ಜೋರ್ಡಾನ್ ನದಿಯ ಪೂರ್ವ ಪ್ರಾಂತ್ಯವಾದ ಇಸ್ರೇಲಿನಲ್ಲಿ ನೆಲೆಸಿದ್ದ ಯಹೂದಿಯರು ಅಬ್ರಾಹಂ ಹಾಗು ಅವನ ಮಗ ಐಸಾಕ್‌ರನ್ನು ತಮ್ಮ ಪೂರ್ವಜರೆಂದು ನಂಬಿ ಅವರು ಉಪದೇಶಿಸಿದಂತೆಯೇ ಜೀವನ ನಡೆಸುತ್ತಿದ್ದರು. ಆದರೆ ಇಜಿಪ್ಟ್‌ನ ದಾಳಿಯ ನಂತರ ಯಹೂದಿಯರನ್ನು ಇಜಿಪ್ಟ್‌ನಲ್ಲಿ ಗುಲಾಮರಂತೆ ದುಡಿಸಿಕೊಳ್ಳಲಾರಂಭಿಸಿದರು. ಅವರ ಧರ್ಮವನ್ನು ಪಾಲಿಸದಂತೆ ತಡೆಗಟ್ಟಿದರು. ನಂತರ ಮೋಸೆಸ್ ಎಂಬುವನು ಯಹೂದಿಯರನ್ನು ಇಜಿಪ್ಟ್‌ನ ಹಿಡಿತದಿಂದ ಬಿಡಿಸಿ ಮತ್ತೇ ಇಸ್ರೇಲಿಗೆ ಹಿಂತಿರುಗುವಂತೆ ಮಾಡಿದನು. ಪ್ರಾರಂಭದಲ್ಲಿ ಹನ್ನೆರಡು ಉಪಪಂಗಡಗಳನ್ನು ಹೊಂದಿದ್ದ ಯಹೂದಿ ಜನಾಂಗ ಉತ್ತರದ ಬೆಂಜಮಿನ್ ಹಾಗೂ ದಕ್ಷಿಣದ ಜೂಡಾ ಎಂದು ಎರಡು ಪಂಗಡಗಳಾಗಿ ವಿಭಜನೆಗೊಂಡರು ರಾಜ ಸೌಲ್, ಡೇವಿಡ್, ಸೊಲೋಮನ್ ಹೀಗೆ ಕ್ರಮವಾಗಿ ಇವರ ನೇತೃತ್ವದಲ್ಲಿ ನೆಮ್ಮದಿಯಿಂದಿದ್ದ ಯಹೂದಿಯರು ಕ್ರಿ.ಪೂ. ೫೮೭ರಲ್ಲಿ ಬ್ಯಾಬಿಲೋನ್‌ನ ದಾಳಿಯಿಂದ ಮತ್ತೇ

---

* www.wikipedia/org.jewishhistory.com

ಝುರ್ಝುರಿತರಾದರು. ಬ್ಯಾಬಿಲೋನ್‌ರ ಕ್ರೌರ್ಯವನ್ನು ತಾಳಲಾರದೆ ಆಗಿನಿಂದಲೇ ಇತರ ದೇಶಗಳಿಗೆ ವಲಸೆ ಹೋಗಲಾರಂಭಿಸಿದರು. ತದನಂತರ ರೋಮ್, ಪರ್ಸಿಯ, ಮಿಡಲ್ ಈಸ್ಟ್ ಹೀಗೆ ವಿವಿಧ ದೇಶಗಳ ಆಕ್ರಮಣದಿಂದ ಯಹೂದಿಯರು ತಮ್ಮ ಮೂಲನೆಲೆಯಾದ ಜೆರುಸಲೇಮ್‌ನ್ನು ಬಿಟ್ಟು ಹೋಗಲಾರಂಭಿಸಿದರು. ರೋಮನ್ನರ ಆಡಳಿತದಲ್ಲಿ ಕ್ರಿಶ್ಚಿಯನ್ನರಾಗಿ ಮತಾಂತರಗೊಳ್ಳದ ಯಹೂದಿಯರನ್ನು ಹಲವಾರು ಕ್ರೂರ ಹಿಂಸೆಗಳಿಗೆ ಒಳಪಡಿಸಲಾಯತು ಹಾಗು ಸೈನಾಗೋಗ್ [synogogue] ಎಂಬ ಚಿಕ್ಕ ಗೂಡಿನಂತಹ ಮನೆಗಳಲ್ಲಿ ನೂರಾರು ಯಹೂದಿಯರನ್ನು ನುಗ್ಗಿಸಿ ಬೆಂಕಿ ಹಚ್ಚಿ ಸಜೀವ ದಹನ ಮಾಡಲಾಯಿತು. ನಂತರ ಬಂದ ಮುಸ್ಲಿಮರು ಸಹ ಯಹೂದಿಯರಿಗೆ ಚಿತ್ರಹಿಂಸೆ ಕೊಟ್ಟು ಕೊಲ್ಲಲಾರಂಭಿಸಿದರು. ಹೀಗೆ ಯಹೂದಿಯರ ಜನಾಂಗವೇ ಚೆಲ್ಲಾಪಿಲ್ಲಿಯಾಯಿತು. ಯುರೋಪ್, ರಷ್ಯಾ, ಜರ್ಮನಿ, ಅಮೆರಿಕಾ ಮುಂತಾದ ದೇಶಗಳಿಗೆ ವಲಸೆ ಹೋದ ಯಹೂದಿಯರು ಅಲ್ಲಿನ ಕ್ರಿಶ್ಚಿಯನ್‌ರಿಂದ ಹಿಂಸಿಸಲ್ಪಟ್ಟರು. ಯಹೂದಿಯರು ಜೀಸಸ್‌ನನ್ನು ದೇವರೆಂದು ಒಪ್ಪಿಕೊಳ್ಳದಿದ್ದ ಕಾರಣ ಕ್ರಿಶ್ಚಿಯನ್ನರು ಅವರ ಮೇಲೆ ಕೋಪಗೊಂಡರು ಹಾಗು ಕ್ರಿಶ್ಚಿಯನ್ನರಾಗಿ ಮತಾಂತರಗೊಳ್ಳಬೇಕೆಂದು ಬಲವಂತ ಪಡಿಸಲಾರಂಭಿಸಿದರು. ಪ್ರತಿಭಟಿಸಿದ ಯುಹೂದಿಯುರನ್ನು ಕೊಲ್ಲಲಾರಂಭಿಸಿದಾಗ ಯಹೂದಿಯರು ತಲೆಮರೆಸಿಕೊಂಡು ಜೀವಿಸಬೇಕಾಯಿತು.

ಎಷ್ಟೆಲ್ಲಾ ಹಿಂಸೆ ಅನುಭವಿಸಿದರೂ ಯಹೂದಿಯರು ತಮ್ಮ ಭಾಷೆ, ಸಂಪ್ರದಾಯ, ಧರ್ಮರಕ್ಷಣೆಗೆ ಚ್ಯುತಿ ಬರಲು ಬಿಡಲಿಲ್ಲ. ಅವರು ಪ್ರಪಂಚದ ಯಾವುದೇ ಪ್ರಾಂತ್ಯದಲ್ಲಿರಲಿ ತಮ್ಮ ಪ್ರತ್ಯೇಕವಾದ ಐಡೆಂಟಿಟಿಯನ್ನು ಉಳಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಯಹೂದಿಯರ ವಲಸೆ ಪ್ರಕ್ರಿಯೆಯ ವ್ಯಾಪ್ತಿ ಬಲುದೊಡ್ಡದು. ಹಾಗೆಯೆ ಅವರು ತಮ್ಮ ಧರ್ಮವನ್ನು ಕಾಪಾಡಿಕೊಂಡು ಬರುತ್ತಿರುವ ಸಾಧನೆಯೂ ಬಹಳ ಹಿರಿಯದು. ಯಾವುದೇ ಮತಾಂಧತೆಯಿಂದ ಒಂದು ಸಶಕ್ತ ಧರ್ಮವನ್ನು ನಶಿಸಲು ಸಾಧ್ಯವಿಲ್ಲವೆಂಬುದಕ್ಕೆ ಯಹೂದಿಯರೇ ಜ್ವಲಂತ ಉದಾಹರಣೆಯಾಗಿದ್ದಾರೆ.

**ಕೆಲವು ಕನ್ನಡ ಕಾದಂಬರಿಗಳಲ್ಲಿ ಮೂಡಿಬಂದಿರುವ ಮತಾಂತರದ ವಿಷಯ :**

ಕನ್ನಡ ಸಾಹಿತ್ಯದಲ್ಲಿ ಹಲವಾರು ಪ್ರಮುಖ ಸಾಹಿತಿಗಳು ಮತಾಂತರದ ಬಗ್ಗೆ ಬರೆದುದುಂಟು. ಅವುಗಳಲ್ಲಿ ಮೂರು ಕಾದಂಬರಿಗಳ ಉದಾಹರಣೆ ಇಲ್ಲಿ ಕೊಡಲಾಗಿದೆ.

### ಶಿವರಾಮ ಕಾರಂತರ 'ಚೋಮನದುಡಿ'

'ಚೋಮನದುಡಿ'ಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹೊಲೆಯರ ಚಿತ್ರಣವಿದೆ. ಈ ಕಥೆಯ ಪ್ರಮುಖ ಪಾತ್ರವಾದ ಚೋಮನು ತನ್ನದೇ ಆದ ಭೂಮಿಯನ್ನು ಖರೀದಿಸಿ ತಾನು ಬೇಸಾಯಗಾರನಾಗಬೇಕೆಂಬ ಕನಸು ಕಾಣುತ್ತಾನೆ. ಆದರೆ ಆ ಒಂದು

ಬಯಕೆಯೇ ಆತನ ದುರಂತಕ್ಕೆ ಕಾರಣವಾಗುತ್ತದೆ. ಆತನ ಒಬ್ಬ ಮಗ ಚನಿಯ ಸತ್ತು, ಇನ್ನೊಬ್ಬ ಮಗ ಗುರುವ ಕಿರಿಸ್ತಾನನಾಗಿ, ಮಗಳು ಬೆಳ್ಳಿ ಕೆಟ್ಟು ಹೋಗಿ ತಾನು ಸಹ ದುಡಿಯನ್ನು ಬಡಿಯುತ್ತಲೇ ಅಸುನೀಗುತ್ತಾನೆ. ಈ ದುರಂತಕ್ಕೆ ಕಾರಣ ವರ್ಣ ಹಾಗು ವರ್ಗಗಳ ಭೇದ ಮಾಡಿರುವ ಸಮಾಜ ವ್ಯವಸ್ಥೆಯೇ ಕಾರಣ. ಸವರ್ಣೀಯರು ಎಲ್ಲಿ ಕೀಳು ಜಾತಿಯ ಜನರು ಸಹ ಬೇಸಾಯ ಮಾಡಲಾರಂಭಿಸಿ ತಮ್ಮ ಸಮಕ್ಕೆ ಬಂದು ಬಿಡುತ್ತಾರೋ ಎಂಬ ಗಾಬರಿಯಿಂದ ಅವರನ್ನು ತಡೆದರೆ, ಶೋಷಣೆಗೊಂಡ ಬಡಜನರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಕ್ರೈಸ್ತ ಪಾದ್ರಿಗಳು ಹೊಂಚು ಹಾಕುತ್ತಿರುತ್ತಾರೆ.

* ಹಿಂದೂ ಸಮಾಜದ ಈ ಕುರುಡುತನ ಒಂದು ಬದಿಗಿದ್ದರೆ ಕ್ರಿಸ್ತೀಯರ ಸ್ವಾರ್ಥದಿಂದ ಕೂಡಿದ ಸಂಕುಚಿತತನದ ಆಸೆ ಬುರುಕುತನ ಇನ್ನೊಂದು ಬದಿಗಿದೆ. ಈ ನೆಪದಿಂದಾಗಿ ಇನ್ನೊಂದು ಕುರಿಯಮರಿ ತಮ್ಮ ಹಿಂಡನ್ನು ಸೇರಿಕೊಂಡರೆ ಸಾಕು ಎನ್ನುವ ಲೆಕ್ಕಾಚಾರ ಅವರದು. ಪಾದ್ರಿಯು "ಬರೇ ಗದ್ದೆಗಳಲ್ಲ, ಬಹಳ ಒಳ್ಳೆಯ ಗದ್ದೆಗಳೇ ಇವೆ. ನಿಮ್ಮ ಹಳ್ಳಿಗೆ ಸಮೀಪದಲ್ಲೇ ಇದೆ. ಆದರೆ ಅದೆಲ್ಲ ಇಗರ್ಜಿಯ ಆಸ್ತಿ. ನಮ್ಮ ಜಾತಿಯವರಿಗಲ್ಲದೆ ಇತರರಿಗೆ ಗೇಣಿಗೆ ಕೊಡಲು ಬರುವುದಿಲ್ಲ" ಎಂದು ಚೋಮನಿಗೆ ಕಡ್ಡಿಮುರಿದಂತೆ ಹೇಳುತ್ತಾನೆ [ಪುಟ ೪೭].

ಚೋಮನು ಸಹ ಎಷ್ಟೇ ಹೆಣಗಾಡಿದರೂ ತನ್ನ ಕನಸು ನನಸಾಗದಾದಾಗ ಹತಾಶನಾಗಿ ಮತಾಂತರ ಹೊಂದಲು ಮನಸ್ಸು ಮಾಡುತ್ತಾನೆ.

'ಕಿರಿಸ್ತೀಯನಾಗಲೆಂದು ಹೊರಟು ನಿಂತ ಚೋಮ ತನ್ನ ರೂಢಿಯಂತೆ ಪಂಜುರ್ಲಿಗೆ ಅಡ್ಡ ಬೀಳುತ್ತಾನೆ. ಪಂಜುರ್ಲಿ ತನ್ನ ಮೈಯ್ಯಲ್ಲಿ ಬಂದಂತೆ ಆತನಿಗೆ ಭಾಸವಾಗುತ್ತದೆ. ತಲೆ ತಲಾಂತರದಿಂದ ಬಂದ ತನ್ನ ಕುಲದೇವತೆಯನ್ನು ಬಿಟ್ಟು ಕಿರಿಸ್ತೀಯನಾಗುವುದು ಹೇಗೆ ? ಎನ್ನಿಸಿ ಚೋಮ ಹಿಂದೇಟು ಹಾಕುತ್ತಾನೆ [ಪುಟ ೧೧೪].

ಚೋಮ ತಾನು ಕೀಳುಜಾತಿಯವನೆಂದು ಎಷ್ಟೇ ಶೋಷಣೆಗೆ ಒಳಗಾದರೂ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳದೆ ಧರ್ಮನಿಷ್ಠೆ ಕಾಪಾಡಿಕೊಂಡರೆ, ಆತನ ಮಗ ಗುರವ ಕಿರಿಸ್ತಾನನಾಗಿಬಿಡುತ್ತಾನೆ. ಹೀಗೆ ಚೋಮನ ದುಃಸ್ಥಿತಿಗೆ ಸಮಾಜ ವ್ಯವಸ್ಥೆಯೇ ಕಾರಣವಾಗುತ್ತದೆ.

## ಮಾಸ್ತಿಯವರ 'ಡುಬಾಯಿ ಪಾದ್ರಿಯ ಒಂದು ಪತ್ರ'

*1 'ಹಿಂದೂ ಜನರ ರೀತಿ ನೀತಿಗಳು' ಎಂಬ ಗ್ರಂಥವನ್ನು ಬರೆದ ಡುಬಾಯಿ ಪಾದ್ರಿ ತನ್ನ ಮಿತ್ರರಿಗೆ ಬರೆದ ಕೆಲವು ಪತ್ರಗಳು ಫ್ರಾನ್ಸ್ ದೇಶದಲ್ಲಿ ನೊಶಬೊನ್

---

* ಡಾ. ಸುಧಾಕರ ಶಂ. ದೇಶಪಾಂಡೆ – ಕರ್ನಾಟಕ ಕಾದಂಬರಿಗಳು ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ ೧೯೯೦ ಪುಟ ೧೭

*1 ಶ್ರೀನಿವಾಸ – ಸಣ್ಣಕತೆಗಳು – ಸಂಪುಟ ೨. ೧೯೯೯ ಏಳನೇಯ ಮುದ್ರಣ – ಪುಟ ೧೭೦

ವಿಶ್ವವಿದ್ಯಾಲಯದ ಪುಸ್ತಕ ಭಂಡಾರದಲ್ಲಿವೆಯಂತೆ. ಅವು ಅಚ್ಚಾಗಿಲ್ಲ ಅವುಗಳಲ್ಲಿ ಒಂದರ ಪ್ರತಿಯನ್ನು ವೆಂಕಟರಾಯನಿಗೆ ಅವನ ಸ್ನೇಹಿತರೊಬ್ಬರು ಕಳುಹಿಸಿದರು. ಇದು ಅದರ ಭಾಷಾಂತರ.

ಮಾಸ್ತಿಯವರು ಈ ಸಣ್ಣಕಥೆಯಲ್ಲಿ ಪಾದ್ರಿಯೊಬ್ಬ ಶ್ರೀರಂಗಪಟ್ಟಣದಿಂದ ಕ್ರಿ.ಶ. ೧೮೦೦ ಡಿಸೆಂಬರ್ ೧೨ನೇ ತಾರೀಖಿನಿಂದು ಬೋಯನಿ ಎಂಬುವ ಅಧಿಕಾರಿಗೆ ಬರೆದ ಪತ್ರದಲ್ಲಿ ಹಿಂದುಗಳನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುವ ಬಗ್ಗೆ ಬರೆದ ವೃತ್ತಾಂತವಿದೆ.

* ಹಿಂದೂ ಮತದಲ್ಲಿ ಕೆಲವು ಕೊರತೆಗಳಿವೆ. ಮಹಮ್ಮದೀಯ ಮತವು ಆ ಕೊರತೆಗಳನ್ನು ಒಂದು ರೀತಿಯಲ್ಲಿ ನಿವಾರಿಸಬಹುದು. ಆದರೆ ಅವರ ಅನುಯಾಯಿಗಳ ಕೆಲವು ರೀತಿಗಳಿಂದ ಅದು ವಿಶೇಷವಾಗಿ ಜನರ ಮನಸ್ಸನ್ನು ಒಲಿಸಿಕೊಳ್ಳಲಾರರು. ಕ್ರೈಸ್ತಮತವು ಹಿಂದೂ ಮತದ ಕೊರತೆಗಳನ್ನು ನಿವಾರಿಸುತ್ತದೆ. ಮಹಮ್ಮದೀಯ ಮತದ ಕಾಠಿಣ್ಯವಿಲ್ಲದಿರುವುದರಿಂದ ಜನರನ್ನು ಒಲಿಸಿಕೊಳ್ಳುತ್ತದೆ. ಹಿಂದೂ ಮತದ ಈ ಕೊರತೆಗಳು ಮುಖ್ಯವಾಗಿ ಮೂರು. ಒಂದು ಅವರು ದೇವರ ಸೃಷ್ಟಿಯನ್ನು ಒಂದು ಲೀಲೆಯೆಂದು ನಡೆಸುತ್ತಿರುವನು ಎನ್ನುವುದು. ಎಂದರೆ ಪ್ರಪಂಚದ ಕಷ್ಟ ದುಃಖ ಬೇನೆಗಳು ಅವನಿಗೆ ಆಟ. ಕ್ರಿಸ್ತಮತದ ದೇವರಂತೆ ಈ ದೇವರು ಮನುಷ್ಯನ ನೋವಿಗಾಗಿ ಕರಗುವವನಲ್ಲ. ಜನ ಸುಖವಾಗಿರುವ ನಾಡಿನಲ್ಲಿ ದೇವರು ಕರುಣಾಮಯನಾಗಿಲ್ಲದಿದ್ದರೂ ತೊಂದರೆಯಿಲ್ಲ. ಕಷ್ಟದಿಂದ ತುಂಬಿರುವ ಈ ಜನಾಂಗದಲ್ಲಿ ದೇವರು ಕಾರುಣ್ಯ ಮೂರ್ತಿಯಿಲ್ಲದೆ ಎಲ್ಲವನ್ನೂ ಲೀಲೆಯೆಂದು ನೋಡುವನೆಂದರೆ ಜನರ ಗತಿಯೇನು? ಈ ಜನರಿಗೆ ಕ್ರೈಸ್ತಮತದ ದೇವರು ಅಗತ್ಯವಾಗಿ ಬೇಕು. ಅವನ ಸ್ವರೂಪವನ್ನು ನಾವು ವಿವರಿಸುವುದೇ ತಡ. ಎಲ್ಲರೂ ಬಂದು ಅವನನ್ನು ಆಶ್ರಯಿಸುವರು. ಇನ್ನೊಂದು ಕೊರತೆಯೇನೆಂದರೆ ಈ ಮತದ ಮುಖ್ಯ ವರ್ಗದವರಾದ ಬ್ರಾಹ್ಮಣರು ಡಾಂಭಿಕರು, ಅಹಂಕಾರಿಗಳು, ಮಹಾಭಿಮಾನ ವಿಹೀನರು. ತಾವು ಸೃಷ್ಟಿಯಲ್ಲಿ ಉಳಿದ ಎಲ್ಲಾ ಜನಕ್ಕಿಂತಲೂ ಶ್ರೇಷ್ಠರೆಂದು ಇವರ ಭಾವನೆ. ಸೃಷ್ಟಿಗೆಲ್ಲ ಆರ್ಯಾವರ್ತ ಪುಣ್ಯಭೂಮಿ. ಏಕೆಂದರೆ ಅವರಲ್ಲಿ ವರ್ಣ, ಆಶ್ರಮ ಧರ್ಮಗಳಿವೆ. ಇಲ್ಲಿಯ ಜನರು ಉಳಿದ ಎಲ್ಲ ದೇಶದ ಜನಗಳಿಗಿಂತ ಶ್ರೇಷ್ಠರು. ಇವರಲ್ಲಿ ನಾಲ್ಕು ಪಂಗಡ. ಅವರಲ್ಲಿ ಬ್ರಾಹ್ಮಣರು ಉತ್ತಮರು. ಇವರು ಬ್ರಹ್ಮನ ಮುಖದಿಂದ ಬಂದವರು ಉಳಿದವರು ಅವನ ಇತರ ಅಂಗಗಳಿಂದ ಬಂದವರು. ಇವರು ಭೂಮಿಗೆ ದೇವತೆಗಳು. ಉಳಿದ ಜನರೆಲ್ಲ ಇವರಿಗೆ ಕಡಿಮೆ. ಜನ್ಮ ಜನ್ಮಾಂತರ ಪ್ರಯತ್ನಪಟ್ಟು ಬ್ರಾಹ್ಮಣರಾಗಬೇಕು. ಇಂಥ ಭಾವನೆಯಿಂದ ಇವರು ವರ್ತಿಸುವುದರ ಫಲವೇನೆಂದರೆ ಹಿಂದಿನಿಂದ ನಡೆದಂತೆ ನಡೆಯೋಣವೆನ್ನುವವರು. ಇವರ ಅಹಂಕಾರವನ್ನು ಹೇಗೋ ಸಹಿಸಿಕೊಂಡು ಹೋಗುತ್ತಾರೆ. ಉಳಿದವರು ಇವರು ನಮಗೆ ಬೇಡವೆನ್ನುತ್ತಾರೆ. ಹಿಂದೂ

---

* ಶ್ರೀನಿವಾಸ – ಸಣ್ಣಕತೆಗಳು – ಸಂಪುಟ ೨. ೧೯೯೯ ಏಳನೇಯ ಮುದ್ರಣ – ಪುಟ ೧೮೩–೧೮೪

ಮತದಲ್ಲಿ ಈ ಬ್ರಾಹ್ಮಣರನ್ನು ಬೇಡವೆನ್ನುವವರು ಎಷ್ಟು ಮಂದಿಯೋ, ಇವರೂ ಕೂಡ ನಿಮಗೆ ಇಷ್ಟವಿದ್ದರೆ ಬಂದು ನಮಗೆ ಕಡಮೆಯೆಂದು ಇರಿ, ಇಲ್ಲದಿದ್ದರೆ ಬಿಡಿ ಎನ್ನುತ್ತಾರೆ. ಇಷ್ಟಾಗಿ ಇವರನ್ನು ದೊಡ್ಡವರೆಂದೇ ಒಪ್ಪಿಕೊಂಡರೆ ಉಳಿದವರಿಗೆ ಏನು ಪ್ರಯೋಜನ ಎಂದರೆ ಇವರನ್ನು ದೊಡ್ಡವರೆಂದದ್ದೇ ಪ್ರಯೋಜನ. ಇತರರು ಏನೇ ಆದರೂ ಬ್ರಾಹ್ಮಣರು ಅವರ ಸಹಾಯಕ್ಕೆ ಹೋಗುವುದಿಲ್ಲ ಜಾತಿ ಕೆಡಿಸಿದರೆಂದು ಯಾರಾದರೂ ಬಂದು ಜಾತಿಗೆ ಸೇರಿಸಿಕೊಳ್ಳಿ ಎಂದರೆ ಇವರು ಆಗುವುದಿಲ್ಲವೆನ್ನುತ್ತಾರೆ. * ನರಸಿಂಹನ ಕತೆಯಿಂದಲೇ ಇದು ವ್ಯಕ್ತವಾಗುತ್ತದೆ ಹಿಂದೂ ಮತದಲ್ಲಿ ನಮ್ಮಲ್ಲಿ ವಾಲ್ವ್ ಎಂದು ಹೇಳುವಂತೆ ಒಂದೇ ಮುಖವಾದ ದಾರಿಯಿದೆ. ಯಾರೇ ಆಗಲಿ ಅದರಿಂದ ಹೊರಕ್ಕೆ ಹೋಗಬಹುದು, ಒಳಕ್ಕೆ ಬರುವಂತಿಲ್ಲ ಹಾಗೆಲ್ಲಾದರೂ ಬಂದುಬಿಟ್ಟಾರೆಂದು ಬಾಗಿಲಿಗೆ ಬ್ರಾಹ್ಮಣರು ಕಾವಲು. ಹಿಂದೂ ಮತದ ಇನ್ನೊಂದು ಕೊರತೆ. ಇದರ ವ್ಯವಹಾರದಲ್ಲಿ ಸೇರಿಕೊಂಡಿರುವ ದೋಷಗಳು ಮತವೆನ್ನುವುದು ಶುದ್ದವಾಗುವುದಕ್ಕೆ ಯತ್ನಮಾಡಬೇಕು, ಅಶುದ್ಧವಾದದ್ದನ್ನು ಬಿಡಲು ನೋಡಬೇಕು. ಇಲ್ಲಿ ಮತದಲ್ಲಿ ಎತ್ತೆತ್ತ ನೋಡಿದರೂ ಅಶುದ್ಧವೇ ಕಣ್ಣಿಗೆ ಕಾಣುತ್ತಿರುತ್ತದೆ. ಇವರ ದೇವರಿಗೆ ಹೆಂಡತಿಯಿಲ್ಲದಿದ್ದರಾಗುವುದಿಲ್ಲ. ಇವರ ಅನೇಕ ದೇವರುಗಳಿಗೆ ಹಲವು ಹೆಂಡಿರು. ಇವರ ಮುಖ್ಯ ದೈವದ ಮುಖ್ಯ ಅವತಾರಕ್ಕೆ ಹೆಂಡತಿರೊಡನೆ ಆಡುವುದು ಮುಖ್ಯ ಕರ್ಮ. ಇವರ ದೇವಾಲಯಗಳಲ್ಲಿ ಉಳಿದ ಎಲ್ಲ ಶಿಲ್ಪದ ಜೊತೆಗೆ ನಗ್ನಾಕೃತಿ ಮೊದಲಾದ ಕೊಳಚೆಯ ಚಿತ್ರಗಳು ಇರುತ್ತವೆ'.

ಹೀಗೆ ಒಬ್ಬ ಪಾದ್ರಿ ಬರೆದ ಪತ್ರದಲ್ಲಿ ಹಿಂದು ಸಮಾಜದಲ್ಲಿ ಬ್ರಾಹ್ಮಣರಿಂದ ಶೋಷಿಸಲ್ಪಡುವ ಕೆಳಜಾತಿಯ ಜನರನ್ನು ಕ್ರೈಸ್ತಮತಕ್ಕೆ ಮತಾಂತರಗೊಳಿಸುವುದು ಸುಲಭಸಾಧ್ಯ ಎಂಬ ವಿಷಯವ್ಯಕ್ತವಾಗಿದೆ.

### ಕುವೆಂಪುರವರ 'ಮಲೆಗಳಲ್ಲಿ ಮದುಮಗಳು'

ಕುವೆಂಪುರವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವರ್ಗ–ವರ್ಣ ಸಂಘರ್ಷದ ವಿಚಾರಗಳನ್ನು ಅಭಿವ್ಯಕ್ತಿಪಡಿಸಿದ್ದಾರೆ. ಈ ಕಾದಂಬರಿಯಲ್ಲೂ ಸಹ ಬ್ರಾಹ್ಮಣರಿಂದ ಧಾರ್ಮಿಕವಾಗಿ ಶೋಷಣೆಗೊಳಗಾಗುವ ಕೆಳಜಾತಿಯ ಜನರನ್ನು ಕ್ರೈಸ್ತಮತಕ್ಕೆ ಸುಲಭವಾಗಿ ಮತಾಂತರಗೊಳಿಸಬಹುದು ಎನ್ನುವ ಉದ್ದೇಶದಿಂದ ಜೀವರತ್ನಯ್ಯ ಎಂಬ ಪಾದ್ರಿ ಬೆಟ್ಟಳ್ಳಿಗೆ ಬರುತ್ತಾನೆ. ಆತ ತನ್ನ ಮತಪ್ರಚಾರಕ್ಕೆ 'ಬೈಸಿಕಲ್ಲ'ನ್ನು ಉಪಯೋಗಿಸುವುದು ಒಂದು ವಿಶಿಷ್ಟ ರೀತಿಯಲ್ಲಿ ಮೂಡಿಬಂದಿದೆ. ಯಾವುದೇ ಕಥನ–ಪಠಣಕ್ಕೆ ಮಣಿಯದ ಜನರು 'ಬೈಸಿಕಲ್'ನಿಂದ ಆಕರ್ಷಕರಾಗಿ ಒಂದೆಡೆ ಸೇರುತ್ತಾರೆ. ಪಾದ್ರಿ ಬೀಸೆಕಲ್ಲಿನ (ಬೈಸಿಕಲ್) ಸವಾರಿ ಮಾಡುವುದನ್ನು ನೋಡಲು ಹೆಚ್ಚಿನ ಸಂಖ್ಯೆಯಲ್ಲಿ ಜನರು ಬರಲಾರಂಭಿಸಿದಾಗ ಜೀವರತ್ನಯ್ಯ ತಾನು ಬಳಸಿದ ತಂತ್ರದ ಬಗ್ಗೆ ಹೆಮ್ಮೆಗೊಳ್ಳುತ್ತಾನೆ.

---

* ನರಸಿಂಹನೆಂಬ ಹುಡುಗ ಅರಮನೆಯ ದೇವಸ್ಥಾನಗಳಿಗೆ ತುಲಸಿಮಾಲೆ ಒದಗಿಸುವವನಾಗಿರುತ್ತಾನೆ. ಆತನನ್ನು ಮುಸಲ್ಮಾನರು ಹಿಡಿದುಕೊಂಡು ಹೋಗಿ ಮುಸಲ್ಮಾನನಾಗಿ ಮತಾಂತರ ಮಾಡುತ್ತಾರೆ. ಅವರಿಂದ ತಪ್ಪಿಸಿಕೊಂಡು ಬಂದು ಪುನಃ ತನ್ನ ಮತದಲ್ಲಿರಲು ಬಯಸಿದಾಗ ಬ್ರಾಹ್ಮಣರು ಅವನನ್ನು ಜಾತಿಯಿಂದಾಚೆ ಇಡುತ್ತಾರೆ. ಅವನು ಬ್ರಾಹ್ಮಣರ ಮೇಲೂ ಮುಸಲ್ಮಾನರ ಮೇಲೆ ರೊಚ್ಚಿಗೇಳುತ್ತಾನೆ. [ಶ್ರೀನಿವಾಸ–ಸಣ್ಣ ಕಥೆಗಳು ಸಂಪುಟ ೨, ಪುಟ ೧೭೫–೧೭೬

*1 'ಪಾದ್ರಿಯ ವೃತ್ತಿ ಬುದ್ಧಿ ತನಗೆ ತಾನೆ ಹೇಳಿಕೊಂಡಿತು. ಮತ ಪ್ರಚಾರಕ್ಕೆ ಬೈಬಲ್ಲು, ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೆ ಹೆಚ್ಚು ಪ್ರಭಾವಶಾಲಿ' ಅದರಲ್ಲೂ ಊರಿನ ಗೌಡ ತನ್ನ ತಂತ್ರದ ಬಲೆಗೆಬಿದ್ದಾಗ ಜೀವರತ್ನಯ್ಯ ಮತ್ತಷ್ಟು ಹುರುಪುಗೊಳ್ಳುತ್ತಾನೆ.

*2 'ಸಮಗ್ರ ಭಾರತದ ಗದ್ದುಗೆ ಏರಿರುವ ಬ್ರಿಟಿಷರು ತಮ್ಮ ಅಧಿಕಾರ ಬಲದಿಂದ ಕ್ರಿಸ್ತೀಯ ಧರ್ಮ ವಿಸ್ತರಣೆಯಲ್ಲಿ ತೊಡಗಿದ್ದಾರೆ. ಉತ್ತಮ ಜಾತಿಯ ಗೌಡನೊಬ್ಬನನ್ನು ಮತಾಂತರಗೊಳಿಸಿದರೆ, ಉಳಿದವರನ್ನು ಮತಾಂತರಗೊಳಿಸುವುದೂ ಸುಲಭವೆಂದು ಅವರು ಭಾವಿಸಿದ್ದಾರೆ. ಅದಕ್ಕಾಗಿ ಹೆಣ್ಣುಗಳ ಆಮಿಷ, ಸ್ಕೂಲು, ಆಸ್ಪತ್ರೆಗಳನ್ನು ತೆರೆಯುವ ಭರಾಟೆಯಲ್ಲಿದ್ದಾರೆ. ಕ್ರೈಸ್ತರ ಆಗಮನದೊಂದಿಗೆ, ಬೈಸಿಕಲ್, ಕಾಫಿ, ಔಷಧಿಗಳು ಹೊಸ ನಾಗರೀಕತೆಯ ಗಾಳಿಯನ್ನು ಮಲೆನಾಡಿನ ಒಡಲಿನಲ್ಲಿ ಬೀಸುತ್ತವೆ. ದೇವಯ್ಯನಂಥ ಗೌಡನೂ ಕ್ರಾಪು ಬಿಟ್ಟು, ಸೈಕಲ್ಲು ಹತ್ತಿ ಕಾಫಿ ಕುಡಿಯ ತೊಡಗಿದ್ದಾನೆ.'

ಹೀಗೆ ಬಚ್ಚ, ದೊಡ್ಡ ಬೀರನಂತಹ ಕೆಳಜಾತಿಯವರನ್ನು ಹಣದ ಆಮಿಷ ತೋರಿಸಿ ಮತಾಂತರಗೊಳಿಸುವ ಜೀವರತ್ನಯ್ಯ ದೇವಯ್ಯನಿಗೆ ಬೈಸಿಕಲ್ಲು, ಆಧುನಿಕ ಪೋಷಾಕುಗಳ ಜೊತೆಗೆ ಆಗಾಗ ತನ್ನ ಮಗಳನ್ನು ಭೇಟಿಯಾಗುವ ಅವಕಾಶವನ್ನು ಕಲ್ಪಿಸಿ ಸಹ ಮತಾಂತರವಾಗುವಂತೆ ಗಾಳ ಹಾಕುತ್ತಾನೆ.

ದೇವಯ್ಯನಾದರೋ ಜೀವರತ್ನಯ್ಯ ಆಧುನಿಕ ಜೀವನ ಶೈಲಿಯ ತಂತ್ರಕ್ಕೆ ಆಕರ್ಷಿತನಾದರೂ ಆತನಿಗೆ ಕಿರಿಸ್ತಾನನಾಗಬೇಕು ಎಂಬ ಹಂಬಲವೇನೂ ಇರುವುದಿಲ್ಲ. ಆದರೆ ತನ್ನ ಜಾತಿಯ ಮೂಢನಂಬಿಕೆಗಳು ಬ್ರಾಹ್ಮಣರ ಡಂಭಾಚಾರದ ವಿರುದ್ಧ ಹೋಗಬಯಸುತ್ತಾನಷ್ಟೇ. ದೇವಯ್ಯನ ಹೆಂಡತಿ ದೇವಮ್ಮ ಬಾಣಂತಿ ಕೋಣೆಯಲ್ಲಿ ಮಗುವಿನೊಡನೆ ಇರುತ್ತಾಳೆ. ಅಲ್ಲಿನ ಕತ್ತಲು, ವಾಸನೆ, ಯಂತ್ರಗಳನ್ನು ನೋಡಿ ದೇವಯ್ಯ ಜುಗುಪ್ಸೆಗೊಳ್ಳುತ್ತಾನೆ.

*3 "ಯಾಕೆ? ಬೆಳಕಿಂಡಿ ಬಾಗಿಲನ್ನೆಲ್ಲ ಹಾಕಿ ಬಿಟ್ಟೀಯಾ? ಒಂದು ಚೂರು ಗಾಳಿ ಬೆಳಕು ಓಡಾಡಬಾರದೇನೆ?" ಎಂದು ಕಿಟಕಿ ಬಾಗಿಲುಗಳನ್ನು ತೆರೆಯತೊಡಗಿದನು.

"ಬಾಲೆಗೆ ಗಾಳಿ ಸೋಂಕು ಆಗ್ತದಂತೆ. ತೆಗಿಬ್ಯಾಡಿ, ರಣಬಿಸಿಲು ಬೇರೆ; ಕೆಟ್ಟ ಕೆಟ್ಟ ದೆಯ್ಯಗಿಯ್ಯ ಓಡಾಡ್ತವಂತೆ ... ಥ್ದು ! ಹೇಳಿದ್ದೊಂದೂ ಗೊತ್ತಾಗಾದಿಲ್ಲ ನಿಮಗೆ. ಮಲಗಿದ್ದ ಬಾಲೇನೂ ಎಬ್ಬಿಸ್ತೀರಿ ಈಗ .... ನಿಮಗೆ ಹಿಡಿದದ್ದೇ ಹಟ!" ಎಂದು ತೊಟ್ಟಿಲ ಹಗ್ಗಕ್ಕೆ ಒಂದು ಅರಿವೆಯ ತುಂಡನ್ನು ಅಡ್ಡ ಕಟ್ಟಿದಳು. ಮಗುವಿಗೆ ಬೆಳಕಿನ ಝಳ ಬೀಳದ ಹಾಗೆ.

ಬೆಳಕಿಂಡಿಯ ಬಾಗಿಲುಗಳನ್ನೆಲ್ಲ ತೆರೆದು ತಿರುಗಿದವನು ತೊಟ್ಟಿಲ ಹಗ್ಗ ಕಟ್ಟಿದ್ದ ಗಳುವಿಗೆ ಬಟ್ಟೆಸುತ್ತಿ ನೇತುಹಾಕಿದ್ದ ಕುಂಕುಮಾಂಕಿತವಾದ ತೆಂಗಿನಕಾಯನ್ನು ನೋಡಿ "ಇದೇನು ಇದು?" ಎಂದು ತಿರಸ್ಕಾರ ಪೂರ್ವಕವಾಗಿ ಕೇಳಿದನು.

---

*1 ಕುವೆಂಪು ; ಮಲೆಗಳಲ್ಲಿ ಮದುಮಗಳು ಪುಟ ೧೫೬

*2 ಪ್ರಸಂ. ಅರವಿಂದ ಮಾಲಗತ್ತಿ ; ಕುವೆಂಪು ಕೃತಿ ವಿಮರ್ಶೆ ೨೦೦೬ ಪುಟ ೬೧೬

*3 ಕುವೆಂಪು ; ಮಲೆಗಳಲ್ಲಿ ಮದುಮಗಳು ೧೯೬೭ ಪುಟ ೨೦೪

ಅದೇನು ಎಂಬುದು ಅವನಿಗೂ ಗೊತ್ತಿದ್ದ ವಿಚಾರವೇ ಆಗಿತ್ತು. ಆದರೆ ಅವನು ನಿನ್ನೆ ತಾನೆ ತೀರ್ಥಹಳ್ಳಿಯಿಂದ ಹಿಂದಿರುಗಿದ್ದನು. ಪಾದ್ರಿಯ ಉಪದೇಶದ ಆವೇಶ ಇನ್ನೂ ಬಿಸಿಯಾಗಿಯೇ ಇತ್ತು. ಜೀವರತ್ನಯ್ಯ ಗೌಡ ಜನಾಂಗದಲ್ಲಿದ್ದ ಮೂಢಾಚಾರ ಮತ್ತು ಮೂಢನಂಬಿಕೆಗಳನ್ನು ಅಪಹಾಸ್ಯ ಮಾಡಿ ಖಂಡಿಸಿದ್ದ. ಗಾಯದ ನೆತ್ತರು ಇನ್ನೂ ಹಸಿಯಾಗಿಯೇ ಇತ್ತು. ಅದಕ್ಕಾಗಿ ತನ್ನ ಮತ್ತು ತನ್ನ ಜಾತಿಯವರ ವಿಚಾರವಾಗಿ ದೇವಯ್ಯನಿಗೆ ಜುಗುಪ್ಸೆ ಹುಟ್ಟಿತ್ತು. ತುಂಬ ಅವಮಾನಕ್ಕೆ ಗುರಿಯಾಗಿತ್ತು ಅವನ ಮನಸ್ಸು. ಅದರ ಪ್ರಭಾವವೆ ಆ ಪ್ರಶ್ನೆಯ ಧ್ವನಿಗೂ ಅದರ ಕರ್ಕಶಕ್ಕೂ ಕಾರಣವಾಗಿತ್ತು.

"ಕಲ್ಲೂರು ದೋಯಿಸರು ಹೆಸರು ಇಟ್ಟುಕೊಡಾಕೆ ಬಂದಿದ್ದಾಗ, ಬಾಲೆಗೆ ಜಕಣೆ, ಪಂಜ್ರೊಳ್ಳಿ ಕಾಟ ಕೊಟ್ಟಾವು ಅಂತಾ, ಮಂತ್ರಿಸಿಕೊಟ್ಟಿದ್ರು ....." ದೇವಮ್ಮ ಪೂರೈಸಿರಲಿಲ್ಲ.

"ಇದು.....?" ತೊಟ್ಟಿಲ ಹಗ್ಗಕ್ಕೆ ನೇತು ಬಿದ್ದಿದ್ದ ಮತ್ತೆರಡು ವಸ್ತುವಿನೆಡೆಗೆ ಕೈ ತೋರಿ ಕೇಳಿದನು.

"ಕಣ್ಣಾ ಪಂಡಿತರ ಅಂತ್ರ"

"ಇವೆಲ್ಲ ಏನು?" ಇನ್ನೂ ಕೆಲವು ಚಿಕ್ಕ ಚಿಕ್ಕ ಗಂಟುಗಳ ಕಡೆ ಕೈ ಮಾಡಿ ಪ್ರಶ್ನಿಸಿದನು.

"ದೇವರು ದಿಂಡರಿಗೆ ಹೇಳಿಕೊಂಡು ಕಾಣಿಕೆ ಕಟ್ಟಿದ್ದು"

"ನಿನಗೇನು ಬೇರೆ ಕಸುಬಿಲ್ಲೇನು ?"

"ಅವೆಲ್ಲ ನಿಮಗ್ಯಾಕೆ ? ಗಂಡಸರಿಗೆ ?"

ದೇವಯ್ಯನ ರೀತಿಯಿಂದಲೂ ಧ್ವನಿಯಿಂದಲೂ ತನ್ನ ಗಂಡನ ಉದ್ದೇಶ ಒಳ್ಳೆಯದಲ್ಲ ಎಂಬುದೇನೋ ದೇವಮ್ಮಗೆ ಗೊತ್ತಿತ್ತು. ಅದರ ಮುಂದೆ ನಡೆದದ್ದಕ್ಕೆ ಅವಳ ಚೇತನ ಸಿದ್ಧವಾಗಿರಲಿಲ್ಲ. ಹಿಂದೆಲ್ಲ ಮೂದಲಿಸುತ್ತಿದ್ದಂತೆಯೊ ಬೈಯುತ್ತಿದ್ದಂತೆಯೊ ಇವತ್ತೂ ಮಾಡಬಹುದೆಂದು ಬಗೆದಿದ್ದಳು. ಆದರೆ ದೇವಯ್ಯ ಮೈಮೇಲೆ ಬಂದವನಂತೆ ಸರಸರನೆ ತೆಂಗಿನಕಾಯಿ ಅಂತ್ರ ಕಾಣಿಕೆಗಳನ್ನೆಲ್ಲ ಕಿತ್ತು ಕಸದ ಮೂಲೆಗೆ ಎಸೆದುಬಿಟ್ಟನು. "ಅಯ್ಯೋ" ಎಂದು ತತ್ತರಿಸುತ್ತ ತಡೆಯಲು ಎದ್ದಿದ್ದ ಬಾಣಂತಿ ಅವನ ಕೈಯ ನೂಕಿಗೆ ಸಿಕ್ಕಿ ಹಾಸಗೆಯ ಮೇಲೆ ಕುಸಿದು ಬಿಕ್ಕಿ ಬಿಕ್ಕಿ ಅಳತೊಡಗಿದಳು.

* 'ಇಲ್ಲಿ ದೇವಯ್ಯ ಕಿತ್ತೆಸೆಯುವುದು ತೆಂಗಿನಕಾಯಿ, ಅಂತ್ರ, ಕಾಣಿಕೆಗಳನ್ನು ಮಾತ್ರವಲ್ಲ, ಮೌಢ್ಯಗಳನ್ನು'.

ಈ ಮೇಲೆ ಉದ್ಧರಿಸಿರುವ ಮತಾಂತರದ ವೃತ್ತಾಂತಗಳನ್ನು ಪರಿಶೀಲಿಸಿದಾಗ ಒಂದು ನಿರ್ದಿಷ್ಟ ಅಂಶವನ್ನು ಗಮನಿಸಬಹುದು. ಕಾರಂತರು, ಮಾಸ್ತಿ, ಕುವೆಂಪು ಈ

---

* ಪ್ರಸಂ. ಅರವಿಂದ ಮಾಲಗತ್ತಿ; ಕುವೆಂಪು ಕೃತಿ ವಿಮರ್ಶೆ ೨೦೦೬ ಪುಟ ೫೭೮

ಮೂವರು ಲೇಖಕರೂ ಸಹ ಹಿಂದು ಸಮಾಜದ ವ್ಯವಸ್ಥೆಯೇ ಮತಾಂತರಕ್ಕೆ ಮುಖ್ಯ ಕಾರಣ ಎಂಬುದನ್ನು ವ್ಯಕ್ತಪಡಿಸಿದ್ದಾರೆ. ವರ್ಗ-ವರ್ಣಗಳ ಭೇದಗಳಿಂದ ಶೋಷಿತರಾದ ಕೆಳಜಾತಿಯ ಜನರು ಕ್ರೈಸ್ತಧರ್ಮ ಬೋಧಿಸಿದ ಸಮಾನತೆಯ ಹೊಸಗಾಳಿಯಿಂದ ಆಕರ್ಷಿತರಾದರು. ಅಂದರೆ ಇಂದಿಗೂ ನಡೆಯುತ್ತಿರುವ ಮತಾಂತರದ ಹಾವಳಿಯನ್ನು ತಡೆಗಟ್ಟಲು ಮೊದಲು ಹಿಂದು ಧರ್ಮದಲ್ಲಿರುವ ಅಸ್ಪೃಶ್ಯತೆ, ಅಸಮಾನತೆಗಳನ್ನು ತೊಲಗಿಸಬೇಕು ಎಂಬುದೇ ಎಲ್ಲಾ ಲೇಖಕರ ಮೂಲ ಉದ್ದೇಶವಾಗಿದೆ.

ಧರ್ಮ, ಸಂಸ್ಕೃತಿ, ಮನುಷ್ಯ-ಮನುಷ್ಯರಲ್ಲಿ ಮಧುರ ಸಂಬಂಧವನ್ನು, ಸಮನ್ವಯವನ್ನು, ಸಹಬಾಳ್ವೆಯನ್ನು ಕಲಿಸಬೇಕೇ ಹೊರತು ಬೇರೆ ಬೇರೆ ಭೇದಗಳನ್ನು ಹುಟ್ಟು ಹಾಕಿ ಮಾನವೀಯತೆಯನ್ನು, ಅಂತಃಕರಣವನ್ನು ನಾಶಪಡಿಸಬಾರದು ಎಂಬುದೇ ಎಲ್ಲಾ ಧರ್ಮಗಳ ಮೂಲ ಉದ್ದೇಶವಾಗಿರುತ್ತದೆ. ಆದರೆ ಬದುಕಿನ ಒಳಾರ್ಥವನ್ನೇ ಅರಿಯದೆ ತಮ್ಮ ಧರ್ಮವೇ ಶ್ರೇಷ್ಠ ಎಲ್ಲರೂ ಅದನ್ನೇ ಪಾಲಿಸಬೇಕು ಎಂದು ಮತಾಂತರ ಮಾಡಲು ಪ್ರಯತ್ನಿಸುವ ಮತಾಂಧರು ಇರುವಂತೆಯೇ ತಮ್ಮ ಧರ್ಮದ ಬಗ್ಗೆ ಕೀಳು ಭಾವನೆ ಹೊಂದಿದ್ದೋ ಅಥವಾ ಅನ್ಯಧರ್ಮೀಯರನ್ನು ಮದುವೆಯಾಗಿಯೋ ಇಲ್ಲಾ ತಮ್ಮ ವೃತ್ತಿಗಾಗಿ, ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿಯೋ ಸ್ವಇಚ್ಛೆಯಿಂದ ಮತಾಂತರಗೊಳ್ಳುವವರು ಸಹ ಇದ್ದಾರೆ. ಬಲವಂತದಿಂದ ಮತಾಂತರಗೊಂಡ ಬಹುತೇಕ ಜನರು ನಂತರ ತಮ್ಮ ಮೂಲ ಧರ್ಮಗಳಿಗೆ ಹಿಂದಿರುಗಿರುತ್ತಾರೆ. ಮತ್ತೇ ಕೆಲವರು ಹೊಸ ಧರ್ಮದಲ್ಲಿದ್ದುಕೊಂಡೇ ತಮ್ಮ ಮೂಲಧರ್ಮದ ಪಾಲನೆಯನ್ನು ಸಹ ಮಾಡಿಕೊಂಡಿರುತ್ತಾರೆ. ಆದರೆ ಸ್ವಇಚ್ಛೆಯಿಂದ ಮತಾಂತರಗೊಂಡವರು ತಮ್ಮ ಮೂಲಧರ್ಮವನ್ನು ಸಂಪೂರ್ಣವಾಗಿ ತ್ಯಜಿಸಲೂ ಆಗದೆ ಹೊಸಧರ್ಮಕ್ಕೆ ಸಂಪೂರ್ಣವಾಗಿ ಹೊಂದಿಕೊಳ್ಳಲೂ ಆಗದೆ ಅತಂತ್ರ ಸ್ಥಿತಿಯಲ್ಲಿರುತ್ತಾರೆ.

ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಎಲ್ಲಾ ವರ್ಗಗಳ ಜನರೂ ಸಮಾನತೆಯಿಂದಿರುವಂತೆ ಹೊರನೋಟಕ್ಕೆ ಕಂಡುಬಂದರೂ ಅವರಲ್ಲೂ ಸಾಕಷ್ಟು ತಾರತಮ್ಯಗಳಿವೆ. ಉದಾಹರಣೆಗೆ ಮತಾಂತರಗೊಂಡ ಮೇಲುವರ್ಗದ ಜನರು ಮತಾಂತರಗೊಂಡ ಕೀಳುವರ್ಗದ ಜನರನ್ನು ಅಸ್ಪೃಶ್ಯರಂತೆಯೇ ಕಾಣುತ್ತಾರೆ. ಎಷ್ಟೋ ಜನ ಮತಾಂತರಗೊಂಡು ಯಾವ ಪುರುಷಾರ್ಥ ಸಾಧಿಸಿದಂತಾಯಿತು ಎಂದು ಪಶ್ಚಾತ್ತಾಪ ಪಡುವವರಿದ್ದಾರೆ.

ಕಾರಣವೇನೇ ಇರಲಿ ಅದರ ಪರಿಣಾಮವೇನೇ ಇರಲಿ 'ಪ್ರಪಂಚದಲ್ಲಿ ಧರ್ಮಕ್ಕಾಗಿ ನಡೆದಷ್ಟು ರಕ್ತಪಾತ ಬೇರೆ ಯಾವ ಕಾರಣಕ್ಕೂ ನಡೆದಿಲ್ಲ' ಎಂದು 'ಸ್ವಪ್ನ ಸಾರಸ್ವತ'ದಲ್ಲಿ ನಾಗ್ಡೊ ಬೇತಾಳ ಹೇಳಿರುವಂತೆ ಇಂದಿಗೂ ವಾಸ್ತವವಾಗಿ ಧರ್ಮ ಸಂಘರ್ಷಣೆಗಳು ನಡೆಯುತ್ತಲೇ ಇವೆ. ಭಾರತದ ಉತ್ತರ ಪೂರ್ವ ರಾಜ್ಯಗಳಲ್ಲಿ ಹೆಚ್ಚಾಗಿ ಕಂಡುಬಂದ

ಮತಾಂತರದ ಪಿಡುಗು ಕರ್ನಾಟಕಕ್ಕೂ ಕಾಲಿಟ್ಟಿದ್ದು ಇತ್ತೀಚೆಗೆ ನಡೆಯುತ್ತಿರುವ ಹಲವಾರು ಹಿಂಸಾಪ್ರಕರಣಗಳಿಗೆ ಕಾರಣವಾಗಿರುವುದು ಶೋಚನೀಯವಾಗಿದೆ. ಯಾವುದೇ ಸ್ವಧರ್ಮದಲ್ಲಿರುವ ಕೊರತೆಗಳನ್ನು ನಿವಾರಿಸಿಕೊಂಡು ಪರಧರ್ಮದ ದಾಳಿಯನ್ನು ತಡೆಗಟ್ಟುತ್ತಾ ಮೂಲ ಸಂಸ್ಕೃತಿಗೆ ಧಕ್ಕೆ ಉಂಟಾಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ನಾಗರಿಕನ ಜವಾಬ್ದಾರಿಯಾಗಿರುತ್ತದೆ.

'ಮಾನವ ತಾನೊಂದೇ ವಲಂ' ಎಂಬ ನಂಬಿಕೆಯಿಂದ 'ಸರ್ವ ಧರ್ಮ ಸಹಿಷ್ಣುತೆ'ಯನ್ನು ಪಾಲಿಸುತ್ತಾ 'ಭಿನ್ನತೆಯಲ್ಲಿ ಏಕತೆ'ಯನ್ನು ಕಾಣುವ ಸಾವಿರಾರು ವರ್ಷಗಳ ಇತಿಹಾಸ ಹೊಂದಿರುವ ಭಾರತೀಯ ಸಂಸ್ಕೃತಿಯ, ಧರ್ಮದ ಸದೃಢ ಬುನಾದಿಯನ್ನು ಯಾವುದೇ ಪರಧರ್ಮವು ಅಲ್ಲಾಡಿಸಲು ಸಾಧ್ಯವಿಲ್ಲವೆನ್ನುವುದಂತೂ ಅಕ್ಷರಶಃ ನಿಜ.



## ಅಧ್ಯಾಯ - ೭

# ಉಪಸಂಹಾರ

ಗೋಪಾಲಕೃಷ್ಣ ಪೈಯವರ "ಸ್ವಪ್ನ ಸಾರಸ್ವತ" ಕಾದಂಬರಿಯಲ್ಲಿ ಮೂಡಿಬಂದಿರುವ ಸಾರಸ್ವತ ಸಮುದಾಯದ ಐತಿಹಾಸಿಕ, ಸಾಮಾಜಿಕ, ಕೌಟುಂಬಿಕ ನೆಲೆಗೆ ಸಂಬಂಧ ಪಟ್ಟಂತೆ ಕೆಲವು ಮುಖ್ಯ ವಿಷಯಗಳನ್ನು ಆಯ್ಕೆ ಮಾಡಿಕೊಂಡು, ಅವುಗಳನ್ನು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿ, ಅಧ್ಯಯನಕ್ಕೆ ಪೂರಕವಾದ ಸಾಮಗ್ರಿಗಳನ್ನು ಬಳಸಿಕೊಂಡು ಈ ಸಂಪ್ರಬಂಧವನ್ನು ರಚಿಸಲಾಗಿದೆ.

ಕಾದಂಬರಿಯ ಕಥಾವಸ್ತು ಪ್ರಮುಖವಾಗಿ ಸಾರಸ್ವತ ಸಮುದಾಯದ ಮೇಲೆಯೇ ಕೇಂದ್ರಿತವಾದ್ದರಿಂದ ಈ ಸಂಪ್ರಬಂಧಕ್ಕೆ 'ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ'ವೆಂದು ಶೀರ್ಷಿಕೆ ನೀಡಲಾಗಿದೆ.

'ಸ್ವಪ್ನ ಸಾರಸ್ವತ'ದಲ್ಲಿ ಐತಿಹಾಸಿಕ ಹಿನ್ನೆಲೆಯಲ್ಲಿ ನಡೆಯುವ ವಿಟ್ಠುಪೈಯ ಕೌಟುಂಬಿಕ ವಂಶಗಾಥೆಯನ್ನು ಗಂಭೀರವಾಗಿ ಪರಿಶೀಲಿಸಿದಾಗ ಈ ಕಾದಂಬರಿ ಒಂದು ದುರಂತ ನಾಟಕದ ಲಕ್ಷಣಗಳನ್ನು ಹೊಂದಿರುವುದನ್ನು ಗಮನಿಸಬಹುದು. ಗೋವೆಯ ವೆರಣೆಯಲ್ಲಿ ಸಮೃದ್ಧ ಜೀವನ ನಡೆಸುತ್ತಿದ್ದ ಸಾರಸ್ವತರು ಪೋರ್ಚುಗೀಸರ ಆಕ್ರಮಣದಿಂದ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಮತಾಂತರದ ಭೀತಿ ವಲಸೆಹೋಗಲು ಕಾರಣವಾಗುತ್ತದೆ. ವಲಸೆ ಪ್ರಕ್ರಿಯೆಯ ಸಮಯದಲ್ಲಿ ಸಾವು-ನೋವು, ರೋಗ-ರುಜಿನ, ದ್ವೇಷ-ಒಳಜಗಳಗಳನ್ನು ಎದುರಿಸುತ್ತಾ ವಿಟ್ಠುಪೈ ಕೊಚ್ಚಿಗೆ ಹೋಗಬೇಕೆಂದು ಚಿಂತಿಸಿದ್ದರೂ ಹಲವಾರು ಕಾರಣಗಳಿಂದ ಕುಂಬಳೆಯಲ್ಲಿ ನೆಲೆಯೂರಬೇಕಾಗುತ್ತದೆ.

ಗೋವೆಯ ವೆರಣೆಯನ್ನು ತಾನು ನೆಲೆಸಿದ ಸ್ಥಳದಲ್ಲಿ ಪುನರ್ ಸೃಷ್ಟಿಸಬೇಕೆಂಬ ಅಜ್ಜ ವಿಟ್ಠುಪೈಯ ಕನಸನ್ನು ಮೊಮ್ಮಗ ರಾಮಚಂದ್ರ ಪೈ ನನಸಾಗಿಸಲು ಮುಂದಾಗುತ್ತಾನೆ. ನಾನಾ ವಿಧದ ಕಷ್ಟಗಳನ್ನೆದುರಿಸಿ ತಾನು ಬಳ್ಳಂಬೆಟ್ಟಿನಲ್ಲಿ ಆಸ್ತಿ ಮಾಡಿಕೊಳ್ಳುವುದರ ಜೊತೆಗೆ ಮಲತಮ್ಮಂದಿರಿಗೂ ಕಾರ್ಯಾಡು, ಕೊಂಬ್ರಾಜೆಗಳಲ್ಲಿ ನೆಲೆ ಮಾಡಿಕೊಡುತ್ತಾನೆ. ಇಲ್ಲಿ ಕಥೆಯ ಬೆಳವಣಿಗೆ ಮತ್ತೇ ಸಮೃದ್ಧ ಜೀವನದೆಡೆಗೆ ಸಾಗಿ ಶಿಖರವನ್ನೇರುತ್ತದೆ. ಆದರೆ ತನ್ನ ಕುಟುಂಬದ ಸದಸ್ಯರೇ ಒಂದಿಲ್ಲೊಂದು ಸಮಸ್ಯೆಗಳನ್ನು ಹುಟ್ಟು ಹಾಕುತ್ತಾ ಪುನಃ ರಾಮಚಂದ್ರ ಪೈಯ ಕುಟುಂಬ ವಿನಾಶದ ಹಾದಿಯನ್ನು ಹಿಡಿಯುತ್ತಾ ಬಂದು ಒಂದೇ ಒಂದು ವಂಶದ ಕುಡಿಯನ್ನುಳಿಸಿ ನಶಿಸಿ ಹೋಗುತ್ತದೆ. ಹೀಗೆ ಕಥೆಯ ಬೆಳವಣಿಗೆಯನ್ನು ಒಂದು ಪಿರಮಿಡ್‌ಗೆ ಹೋಲಿಸಿದಾಗ

ಅದು ಕೆಳಗಿನಿಂದ ಮೇಲ್ಮುಖವಾಗಿ ಸಾಗಿ ಶಿಖರಕ್ಕೇರಿ ಮತ್ತೇ ಕೆಳಮುಖವಾಗಿ ನೆಲಕಚ್ಚುತ್ತದೆ. ಹೀಗೆ ಅರಿಸ್ಟಾಟಲ್ 'ಪೊಯೆಟಿಕ್ಸ್' ಕೃತಿಯಲ್ಲಿ ಹೇಳಿರುವಂತೆ ಈ ಅಂಶವನ್ನು ಹೊಂದಿದ್ದು. 'ಸ್ವಪ್ನ ಸಾರಸ್ವತ' 'ಟ್ರ್ಯಾಜೆಡಿ' ಜಾನರ್ [genre]ಗೆ ಸೇರಿದೆಯೆಂದು ಹೇಳಬಹುದು.

ಕಥೆಗೆ ವೈಶಿಷ್ಟ್ಯ ನೀಡಿರುವ ಮತ್ತೊಂದು ಅಂಶವೆಂದರೆ ಪಾತ್ರಗಳ ಚಿತ್ರಣ. ಯಾವುದೇ ಪಾತ್ರಗಳನ್ನು ವೈಭವೀಕರಿಸದೆ ಅವುಗಳ ಮೇಲೆ ಮಾನವ ಸಹಜ ದೌರ್ಬಲ್ಯಗಳನ್ನು, ಮನೋಕಾಮನೆಗಳನ್ನು, ಅರಿಷಡ್ವರ್ಗ ಗುಣಗಳನ್ನು ಹೊರಿಸಿರುವುದನ್ನು ಕಾಣಬಹುದು. ಅಂತು ಪೈಯ ಹೆಣ್ಣುಮರಳುತನ, ತಿಮ್ಮಪೈಯ ಹಠಮಾರಿತನ, ಭುಜಂಗಪೈಯ ಸೇಡಿನ ತಿಳಿಗೇಡಿತನಗಳಂತಹ ನಕಾರಾತ್ಮಕ ಗುಣಗಳು ಆ ಪಾತ್ರಗಳನ್ನೇ ಬಲಿತೆಗೆದುಕೊಳ್ಳುತ್ತದೆ. ಕಥೆಯ ಪಾತ್ರಗಳಾದ ವಿಟ್ಠುಪೈ ಹಾಗು ರಾಮಚಂದ್ರ ಪೈ ಸಹ ಮನೋಕಾಮನೆಗಳಿಂದ ದೂರವಾಗಿಲ್ಲ. ಕ್ರಿಶ್ಚಿಯನ್ನರನ್ನು ಕಂಡರಾಗದಿದ್ದರೂ ಗೋಯೆಸ್‌ನ ಮಗಳು ಅಲ್ವೀರಾಳೊಡನೆ ದೈಹಿಕ ಸಂಪರ್ಕ ಬೆಳೆಸುವ ವಿಟ್ಠುಪೈ, ಧಡ್ಡ ಶಿಕ್ಷೆ ಅನುಭವಿಸುತ್ತಿರುವಾಗಲೂ ತಾನು ಅಲ್ವೀರಾಳ ಸಂಗ ಬಯಸುವಾಗ ಇಂತಹ ಸಮಯದಲ್ಲೂ ಮಂಗನ ಮನಸ್ಸೇ ಎಂದು ತನ್ನ ದೌರ್ಬಲ್ಯವನ್ನು ಹಳಿಯುತ್ತಾನೆ. ರಾಮಚಂದ್ರಪೈಗೂ ಹೆಣ್ಣುಗಳ ಸಂಪರ್ಕವಿತ್ತು ಎಂಬುದನ್ನು ಆತ ಹಾಸಿಗೆ ಹಿಡಿದು ಮಲಗಿದಾಗ ಅವನ ಶುಶ್ರೂಷೆಗೆ ನಿಂತ ಹುಡುಗರ ಮಾತಿನಿಂದ ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಪಾತ್ರಗಳು ನೈಜ ಜೀವನದಲ್ಲಿ ಕಂಡುಬರುವ ಸಾಮಾನ್ಯ ಜನಜೀವನವನ್ನು ಬಿಂಬಿಸುವಂತೆ ಚಿತ್ರಿತವಾಗಿದೆ.

ಹಾಗೆಯೇ ಅಸಂಖ್ಯಾತ ಪಾತ್ರಗಳಿದ್ದರೂ ಯಾವುದೇ ಗೊಂದಲ ಸೃಷ್ಟಿಸದೆ ಕಥೆಯು ಸುಲಭವಾಗಿ ಮುಂದುವರೆಯುತ್ತಾ ಹೋಗುತ್ತದೆ. ನಾಲ್ಕು ಭಾಗಗಳಲ್ಲಿ ವಿಭಜನೆಗೊಂಡಿರುವ ಕಥೆ, ಮೊದಲ ಭಾಗದಲ್ಲಿ ವೈಯಕ್ತಿಕ ನೆಲೆಯಲ್ಲಿ ಪ್ರಾರಂಭವಾಗಿ ಎರಡನೆಯ ಭಾಗದಲ್ಲಿ ಸಮುದಾಯದ ಕತೆಯಾಗುತ್ತದೆ. ನಂತರ ವಿಟ್ಠುಪೈ ಕುಂಬಳೆಯಲ್ಲಿ ನೆಲೆ ನಿಂತಾಗ ವೈಯಕ್ತಿಕವಾಗಿ ತದನಂತರ ಪುನಃ ಸಮುದಾಯದ ಕಥೆಯಾಗಿ ಮುಂದುವರೆಯುತ್ತದೆ. ರಾಮಚಂದ್ರ ಪೈ ಬಳ್ಳಂ ಬೆಟ್ಟಿನಲ್ಲಿ ನೆಲೆಯೂರಿದಾಗ ವೈಯಕ್ತಿಕವಾಗಿ ನಡೆಯುವ ಕಥೆ ಹಲವಾರು ಸಂದಿಗ್ಧ ಸನ್ನಿವೇಶ, ಪ್ರಸಂಗಗಳು ನಡೆದು ಕೊನೆಯಲ್ಲಿ ಒಂದೇ ಒಂದು ಚಿಕ್ಕ ಗಂಡು ಮಗು ಉಳಿಯುವುದರಲ್ಲಿ ಕೊನೆಗೊಳ್ಳುತ್ತದೆ.

ಚರ್ಚೆಗೆ ಅವಕಾಶ ನೀಡುವ ಮತ್ತೊಂದು ಅಂಶವೆಂದರೆ ಕಥೆಯಲ್ಲಿ ನಡೆಯುವ ಹಲವಾರು ದುರ್ಘಟನೆಗಳತ್ತ ಗಮನಹರಿಸಿದಾಗ ಅವುಗಳಿಗೆ ಕಾರಣ ಯಾರು? ಸ್ವತಃ ಪಾತ್ರಗಳೇ ವಿನಾಶದ ಹಾದಿಯಲ್ಲಿ ನಡೆಯುತ್ತವೆಯೋ ಅಥವಾ ಯಾವುದೋ ಅಗೋಚರ ಶಕ್ತಿ ಹಾಗೆ ಮಾಡಲು ಅವರನ್ನು ಪ್ರೇರೇಪಿಸುತ್ತಿದೆಯೋ ಎಂಬ ದ್ವಂದ್ವ ಹುಟ್ಟುವುದಂತೂ ನಿಜ. ಕಥೆ ಪೂರ್ವಾರ್ಧವು ಚರಿತ್ರೆಯ ದಾಖಲೆಯಾದ್ದರಿಂದ ಅದನ್ನು ಬದಲಿಸಲು ಸಾಧ್ಯವಿಲ್ಲ. ಆದರೆ ಉತ್ತರಾರ್ಧದಲ್ಲಿ ಮತ್ತೇ ತಮ್ಮ ಅಸ್ತಿತ್ವವನ್ನು ಕಂಡುಕೊಂಡ ರಾಮಚಂದ್ರಪೈನ ಕುಟುಂಬದ ಅಳಿವಿಗೆ ಕಾರಣ ಏನು ಎಂಬುದನ್ನು ಚಿಂತಿಸಬೇಕಾಗುತ್ತದೆ. ತಿಮ್ಮಪೈ ಚಿಕ್ಕಪ್ಪಂದಿರ ಜೊತೆ ಜಗಳವಾಡುವ ಮೊದಲೇ

ರಾಮಚಂದ್ರಪೈ ಅಲ್ಲಿದ್ದು ತಡೆದಿದ್ದರೆ ಮುಂದಾಗುವ ಅನಾಹುತವನ್ನು ತಪ್ಪಿಸಬಹುದಿತ್ತೇ? ಹನ್ನೆರಡು ವರ್ಷದ ಮುಗ್ಧ ಬಾಲಕಿ ಜಾಹ್ನವಿ ಪಕ್ಕದ ಮನೆಯಲ್ಲೇ ಒಂಟಿಯಾಗಿ ಜೀವಿಸುತ್ತಿದ್ದರೂ ಅವಳ ಪರಿವೆಯೇ ಇಲ್ಲದೆ ಮರೆತೇ ಬಿಡಲು ಸಾಧ್ಯವೇ? ಕಾವೇರಮ್ಮನಾಗಲಿ ದೇವು ಪೈಯಾಗಲಿ ಭುಜಂಗಪೈಯ ತಿಳಿಗೇಡಿತನದ ಅರಿವಿದ್ದರೂ ಅವನನ್ನು ಸರಿದಾರಿಗೆ ತರಲು ಪ್ರಯತ್ನಿಸಲಿಲ್ಲವೇಕೆ ? ಹೀಗೆ ಕೆಲವು ಪ್ರಶ್ನೆಗಳು ಉದ್ಭವಿಸಿದಾಗ ಅವುಗಳಿಗೆ ನಿರ್ದಿಷ್ಟ ಉತ್ತರ ಹುಡುಕುವುದು ಕಷ್ಟವಾಗುತ್ತದೆ.

* All the world's stage and all the men and women nearly players ಎಂದು ಶೇಕ್ಸ್‌ಪಿಯರ್ ಹೇಳಿರುವಂತೆ ಯಾರೋ ಒಬ್ಬ ಸೂತ್ರಧಾರ ಈ ಘಟನೆಗಳನ್ನು ನಡೆಸುತ್ತಿರಬಹುದೋ ಎಂದು ಊಹಿಸಬೇಕಷ್ಟೆ.

"ವಿನಾಶದ ಅಂಚಿನಲ್ಲಿ ಮನುಷ್ಯ ತನ್ನ ಶಕ್ತಿಯನ್ನು ಮೀರಿದ ಒಂದು ಶಕ್ತಿಗೆ ತಲೆಬಾಗುತ್ತಾನೆ. ಆಗ ಆ ಶಕ್ತಿಯ ಸಾಧ್ಯಸಾಧ್ಯತೆಯನ್ನು ಅರಿತುಕೊಳ್ಳುತ್ತಾನೆ. ನಿನಗೆ ಗೊತ್ತಿರುವ, ಸಂಗತಿ ಒಂದಾದರೆ ಗೊತ್ತಿಲ್ಲದ ಸಂಗತಿಗಳು ನೂರಾರಿರುತ್ತದೆ. ಆದರೆ ಎಲ್ಲವನ್ನೂ ತಿಳಿದವನು ನಗುತ್ತಾನಲ್ಲವೇ? ಇಡೀ ಪ್ರಪಂಚವನ್ನು ಸುತ್ತಿದ್ದೇನೆ ಭೂಮಿ ಚಪ್ಪಟೆಯಾಗಿಲ್ಲ, ಹಾಗೆಂದು ತಿಳಿದು ನಂಬಿದ ಜನರಿದ್ದರು. ಅದು ಗೋಲಾಕಾರವಾಗಿದೆ. ಇಲ್ಲಿಂದ ಹೊರಟರೆ ಇಲ್ಲಿಗೇ ಬಂದು ಮುಟ್ಟುತ್ತೇವೆ. ಬದುಕೂ ಹಾಗೆಯೇ ಮತ್ತೆ ಮತ್ತೆ ಅಲ್ಲಿಗೇ ಬಂದು ಬಿಡುತ್ತೇವೆ. ಮನುಷ್ಯ ಎಷ್ಟು ಸಣ್ಣವನು ಗೊತ್ತೇ ನಿನಗೆ? ಆದರೂ ತನ್ನಿಂದಲೇ ಈ ಲೋಕ ಎಂದು ತಿಳಿದಿದ್ದಾನೆ. ತಾನು, ತನ್ನದು, ತನ್ನಿಂದ ಎನ್ನುವುದೆಲ್ಲ ಭ್ರಮೆಯೋ ರಾಮಚಂದ್ರ ಪೈ. ಆ ಆಕಾಶ ನೋಡು, ಅಲ್ಲಿರುವ ನಕ್ಷತ್ರಗಳನ್ನು ನೋಡು, ಸತ್ತವರು ನಕ್ಷತ್ರಗಳಾಗುವುದಿಲ್ಲ. ಹಾಗೆಂದು ತಿಳಿದವರು ನಕ್ಷತ್ರಗಳಾಗುತ್ತಾರೆ" [ಸ್ವಸಾ. ಪುಟ ೪೬೭]

ನಾಗ್ಡೊ ಬೇತಾಳ ಕೊನೆಯಲ್ಲಿ ರಾಮಚಂದ್ರ ಪೈಗೆ ಹೇಳುವ ಈ ಮಾತುಗಳಲ್ಲಿ ಜೀವನ ಸಾರಾಂಶವೇ ಅಡಗಿದೆ ಹೀಗೆ ಕಥೆಯಲ್ಲಿ ವ್ಯಕ್ತವಾಗಿರುವ 'ಪುನರಪಿ ಜನನಂ, ಪುನರಪಿ ಮರಣಂ' ಎಂಬ ತತ್ವ ಈ ಕಾದಂಬರಿಯ ಜೀವನ ದರ್ಶನವಾಗಿದೆ.

ಒಟ್ಟಾರೆ 'ಸ್ವಪ್ನ ಸಾರಸ್ವತ'ದ ಕಥೆಯ ಒಳಹೊಕ್ಕು ಎಳೆಎಳೆಯಾಗಿ ಬಿಡಿಸಿ ನೋಡಿದಾಗ ಹೊಸ ಹೊಸ ಆಯಾಮಗಳು ತೆರೆದುಕೊಳ್ಳುತ್ತಾ ಹೋಗುತ್ತವೆ. ಮತ್ತೇ ಮತ್ತೇ ಮೊಗೆದಷ್ಟು ಹಲವಾರು ವಿಷಯಗಳು ಹೊರಹೊಮ್ಮುತ್ತಾ ಇನ್ನೂ ಹೆಚ್ಚು ಸಂಶೋಧನೆಗಳಿಗೆ ಸಾಮಾಗ್ರಿಗಳನ್ನು ಒದಗಿಸುವಂತಹ ವ್ಯಾಪ್ತಿ ಹೊಂದಿದೆ. ಇದುವರೆಗೆ ಈ ಕಾದಂಬರಿಯ ಬಗ್ಗೆ ಕೆಲವೇ ಕೆಲವು ಪ್ರಬಂಧಗಳು ಪ್ರಕಟವಾಗಿದ್ದು ಸಂಶೋಧನಾಸಕ್ತ ವಿದ್ಯಾರ್ಥಿಗಳಿಗೆ ವಿಪುಲ ಅವಕಾಶಗಳನ್ನು ಒದಗಿಸುತ್ತದೆ. ಮುಂದೆ ನಡೆಯುವ ಸಂಶೋಧನೆಗಳಿಗೆ ಆಕರವಾಗಿ ಅಧ್ಯಯನಕ್ಕೆ ನೆರವಾಗಬೇಕೆಂಬ ಸದುದ್ದೇಶದಿಂದ 'ಸಾರಸ್ವತ ಸಮುದಾಯದ ಸಾಂಸ್ಕೃತಿಕ ಅಧ್ಯಯನ' ಎಂಬ ಈ ಸಂಪ್ರಬಂಧವನ್ನು ಪ್ರಸ್ತುತಪಡಿಸಲಾಗಿದೆ.

---

* william Shakespeare : As you like it Act to scene seven 139-143

# ಅನುಬಂಧ

## ಆಕರಗ್ರಂಥ :


ಸ್ವಪ್ನ ಸಾರಸ್ವತ – ಗೋಪಾಲಕೃಷ್ಣ ಪೈ<br>ಭಾಗ್ಯಲಕ್ಷ್ಮೀ ಪ್ರಕಾಶನ<br>ಬೆಂಗಳೂರು 2009


## ಪರಾಮರ್ಶನ ಕೃತಿಗಳು :


1. ಕನ್ನಡ ಕಥನ ಸಾಹಿತ್ಯ; ಕಾದಂಬರಿ – ಜಿ.ಎಸ್. ಆಮೂರ<br>ಶ್ರೀಹರಿ ಪ್ರಕಾಶನ, ಧಾರವಾಡ, 1994
2. ಕನ್ನಡ ಸಾಹಿತ್ಯ ಚರಿತ್ರೆ – ರಂ.ಶೀ ಮುಗಳಿ<br>ಗೀತಾಬುಕ್ ಹೌಸ್<br>ಮೈಸೂರು 19ನೇಯ ಮುದ್ರಣ, 2010
3. ಕನ್ನಡ ಸಾಹಿತ್ಯ ಸಂಸ್ಕೃತಿ ಮಿಮಾಂಸೆ – ಸಿ.ಜಿ. ಹೊನ್ನಯ್ಯ<br>ಜೈ ಭೀಮ್ ಪ್ರಕಾಶನ<br>ಬೆಂಗಳೂರು, 2005
4. ಸಮುದಾಯ ಮತ್ತು ಸಂಸ್ಕೃತಿ – ಡಾ. ಬಸವರಾಜ ಸಬರದ<br>ಕನ್ನಡ ಸಾಹಿತ್ಯ ಪರಿಷತ್ತು<br>ಬೆಂಗಳೂರು, 2002
5. ವಿಮರ್ಶೆಯ ಪರಿಭಾಷೆ – ಓ.ಎಲ್. ನಾಗಭೂಷಣ ಸ್ವಾಮಿ<br>ಅಂಕಿತ ಪುಸ್ತಕ, ಬೆಂಗಳೂರು, 1998
6. ಮಲೆಗಳಲ್ಲಿ ಮದುಮಗಳು – ಕುವೆಂಪು<br>ಉದಯರವಿ ಪ್ರಕಾಶನ<br>ಮೈಸೂರು 14ನೇಯ ಮುದ್ರಣ, 2009
7. ಕುವೆಂಪು ಕೃತಿ ವಿಮರ್ಶೆ – ಪ್ರೊ. ಅರವಿಂದ ಮಾಲಗತ್ತಿ<br>ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ<br>ಮೈಸೂರು, 2006
8. ಸಿದ್ಧಿಯರ ಸಂಸ್ಕೃತಿ – ಹಿ.ಚಿ. ಬೋರಲಿಂಗಯ್ಯ<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಬೆಂಗಳೂರು, 1993

9. ಕಾರಂತರ ಕಾದಂಬರಿಗಳು ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ – ವಿರೂಪಾಕ್ಷ ಕುಲಕರ್ಣಿ, ಕರ್ನಾಟಕ ಸಂಘ, ಪುತ್ತೂರು, 1990

10. ಸಂಸ್ಕೃತಿ – ಡಿ.ವಿ.ಜಿ. ಕಾವ್ಯಾಲಯ ಪ್ರಕಾಶನ ಬೆಂಗಳೂರು, 1956

11. ದೊಡ್ಡಮನೆ – ಎಚ್.ಎಲ್. ನಾಗೇಗೌಡ ಸಾಹಿತ್ಯ ಸದನ ಪ್ರಕಾಶನ ಬೆಂಗಳೂರು, 1972

12. ಸಣ್ಣ ಕತೆಗಳು ಸಂಕಲನ 2 – ಶ್ರೀನಿವಾಸ ಜೀವನ ಕಾರ್ಯಾಲಯ ಟ್ರಸ್ಟ್ (ರಿ.) ಬೆಂಗಳೂರು, 1989

13. **Migrant Brahmanas in Northern India** - Swathi Datt Motilal Banarsidass Patna, 1989

14. **English Literature** - William J. Long Surjeet publications Delhi, 2009

15. **As you Like it** - William Shakespeare First Folio, London, 1623

**ಅಂತರ್ಜಾಲದ ತಾಣಗಳು**

www.saraswathhistory.com

www.wikepedia/org.jewishhistory.com

www.dc.e-paper.com

en.wikepedia.org/wiki/portuguese_india

www.wikepedia.portuguese,empire

